# ಉನ್ನತ ಶಿಕ್ಷಣದಲ್ಲಿ ಮೀಸಲಾತಿ

## ಸಕಾರಾತ್ಮಕ ಕ್ರಿಯೆಯ ಪುನರ್ವಿನ್ಯಾಸ

## ಉನ್ನತ ಶಿಕ್ಷಣದಲ್ಲಿ ಜಾತಿಗಳು ಮತ್ತು ಪ್ರಯೋಜನಗಳು

ಸಕಾರಾತ್ಮಕ ಕ್ರಿಯೆಯಲ್ಲಿ ಉತ್ತಮವಾದ ನೀತಿಯ ವಿನ್ಯಾಸಗೊಳಿಸುವಿಕೆಯನ್ನು ಪ್ರತಿಪಾದಿಸುತ್ತಾ ಈ ಲೇಖನವು ಜಾತಿಯ ಕೋಟಾಗಳ ಒಂದು ಕಾರ್ಯಸಾಧ್ಯ ಪರ್ಯಾಯದ ಸಚಿತ್ರ ಮಾದರಿಯನ್ನು ಮುಂದಿಡುತ್ತದೆ. ಈ ಪ್ರಸ್ತಾವಿತ ಮಾದರಿಯು ಸಾಧಾರವಾದುದು ಮತ್ತು ಗುಂಪು ಹಾಗೂ ವ್ಯಕ್ತಿಗತ ಅನನುಕೂಲತೆಗಳ (ಜಾತಿ, ಪ್ರಾದೇಶಿಕ, ಲಿಂಗಾಧಾರಿತ ಮತ್ತು ಗ್ರಾಮ/ಪಟ್ಟಣ ವಾಸ್ತವ್ಯ), ಮೂಲಗಳನ್ನಲ್ಲದೆ ಪರಸ್ಪರ ಸಂವಹನದ ಪರಿಣಾಮಗಳು ಮತ್ತು ಅನನುಕೂಲತೆಗಳ ಪ್ರಮಾಣವನ್ನು ಇದು ಉದ್ದೇಶಿಸಿದೆ. ಇಂತಹ ದೃಷ್ಟಿಕೋನವು ನಮಗೆ ಸಕಾರಾತ್ಮಕ ಕ್ರಿಯೆಯು "ತುಷ್ಟೀಕರಣ"ಕ್ಕೆ ಸಂಬಂಧಪಟ್ಟುದಲ್ಲ, ಬದಲಿಗೆ ನಮ್ಮ ಅಸಮಾನ ಸಮಾಜದಲ್ಲಿರುವ ಕಣ್ಣಿಗೆ ಕಾಣಿಸುವಂತಹ ಅನನುಕೂಲತೆಗಳ ಮೂಲಗಳನ್ನು ಕಿತ್ತುಹಾಕುವುದಕ್ಕೆ ಸಂಬಂಧಿಸಿದೆ ಎಂದು ತೋರಿಸಲು ಅನುವು ಮಾಡಿಕೊಡುತ್ತದೆ.

**<u>ಸತೀಶ್ ದೇಶಪಾಂಡೆ, ಯೋಗೇಂದ್ರ ಯಾದವ್</u>**

ಭಾರತದ ಸಕಾರಾತ್ಮಕ ಕ್ರಿಯಾನೀತಿಯು ಜಗತ್ತಿನಲ್ಲೇ ಅತ್ಯಂತ ಬೃಹತ್ತಾದ, ದೀರ್ಘವಾದ, ಅತ್ಯಂತ ವಿಸ್ತೃತವಾದ ಮತ್ತು ಅತ್ಯಂತ ಯಶಸ್ವಿಯಾದ ಉಪಕ್ರಮವೆಂದು ಪ್ರತಿಪಾದಿಸಲಾಗಿದೆ. ಈ ಪ್ರತಿಪಾದನೆಗಳಲ್ಲಿ ಸ್ವಲ್ಪ ಸತ್ಯವಿದೆ. ಆದರೆ ಅದೇ ಸಮಯದಲ್ಲಿಅಂತಹ ನೀತಿಯ ವಿನ್ಯಾಸದೆಡೆಗೆ ನಿರಂತರವಾಗಿ ಗಮನಹರಿಸುತ್ತಿಲ್ಲ ಎನ್ನುವುದೂ ಅಷ್ಟೇ ಸತ್ಯ. ವಾಸ್ತವದಲ್ಲಿ, ಭಾರತ ಗಣರಾಜ್ಯವು ತನ್ನ ಪ್ರಾರಂಭದ ದಿನಗಳಿಂದಲೆ ಮೊದಲೇ ವಿನ್ಯಾಸಗೊಳಿಸಲಾದ ಮತ್ತು ಮೊದಲೇ ನಿಯತಗೊಳಿಸಲಾದ ಸಕಾರಾತ್ಮಕ ಕ್ರಿಯಾನೀತಿಯನ್ನು ಅಳವಡಿಸಿಕೊಂಡು ಬಂದಿದೆ. ೧೯೫೦ರಲ್ಲಿ ಸಂವಿಧಾನವನ್ನು ಅಳವಡಿಸಿಕೊಂಡ ಕಾಲದಿಂದಲೇ ನಿಗದಿತ ಜಾತಿಗಳು ಮತ್ತು ಸಮುದಾಯಗಳಿಗೆ ಆಯ್ದ ಕ್ಷೇತ್ರಗಳಲ್ಲಿ (ಶಾಸಕಾಂಗಗಳು, ಸರಕಾರಿ ಹುದ್ದೆಗಳು, ಶಿಕ್ಷಣ) ಪ್ರಮಾಣಾನುಗುಣ ಕೋಟಾಗಳನ್ನು ನೀಡಲಾದ ಮೂಲ ಸಕಾರಾತ್ಮಕ ಕ್ರಿಯೆಯ ಆದೇಶಗಳಲ್ಲಿ ಸತ್ವಯುತವಾದ ಯಾವುದೇ ಬದಲಾವಣೆಗಳಾಗಿಲ್ಲ

ಈಗಾಗಲೆ ನಮಗೆ ಸ್ಪಷ್ಟವಾಗಿರುವಂತೆ ಈ ತರಹದ ಗುರಿನಿರ್ದೇಶಿತ ಕೋಟಾಗಳಲ್ಲಿ ಒಳ್ಳೆಯದು ಸಾಕಷ್ಟಿದೆ. ರಾಜಕೀಯ ಐಕಮತ್ಯ ಮತ್ತು ವಿಧೇಯತೆಯನ್ನು ಅವು ಪ್ರೋತ್ಸಾಹಿಸುತ್ತವೆ. ಅವುಗಳ ನಿರ್ವಹಣೆ ಮತ್ತು ಉಸ್ತುವಾರಿ ಕಷ್ಟವಾದುದಲ್ಲ; ಮತ್ತು ಅರ್ಹವಲ್ಲದ ಗುಂಪುಗಳು ಅದರ ಉಪಯೋಗ ಪಡೆದುಕೊಳ್ಳುವುದನ್ನು ಅವು ಅಡ್ಡಿಪಡಿಸುತ್ತವೆ. ಆದಾಗ್ಯೂ, ಎಲ್ಲ ಸಕಾರಾತ್ಮಕ ಕ್ರಿಯೆಯಗಳ ಸಮಸ್ಯೆಗಳಿಗೆ ಕೋಟಾಗಳು ಉತ್ತಮ ಪರಿಹಾರವಾಗಿರಬೇಕು ಎಂದೇನಿಲ್ಲ. ಆದರೆ ಸಮಕಾಲೀನ ಭಾರತದಲ್ಲಿ ಅವು ಒಂದು ಬಗೆಯ ಪೂರ್ವನಿಯೋಜಿತ ಆಯ್ಕೆಗಳಾಗಿರುವಂತೆ ಕಾಣಿಸುತ್ತವೆ. ಇದು ಕೇವಲ ಸಕಾರಾತ್ಮಕ ಕ್ರಿಯೆಯನ್ನು ಶಿಕ್ಷಣ ವಲಯದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳನ್ನು ಹೊರತುಪಡಿಸಿ ಇತರ ಗುಂಪುಗಳಿಗೆ ವಿಸ್ತರಿಸುವುದರ ಕುರಿತಾಗಿ ಇತ್ತೀಚಿನ ಚರ್ಚೆಗಳಿಗೆ ಮಾತ್ರ ಸಂಬಂಧಿಸಿದ್ದಲ್ಲ, ಶಾಸಕಾಂಗಗಳಿಗೆ ಹೆಚ್ಚು ಪ್ರಮಾಣದಲ್ಲಿ ಮಹಿಳೆಯರನ್ನು ತರುವ ಅಥವಾ ಖಾಸಗಿ ವಲಯದಲ್ಲಿ ಉದ್ಯೋಗದಲ್ಲಿರುವವರ ಸಾಮಾಜಿಕ ಹಿನ್ನೆಲೆಯನ್ನು ಪರಿಷ್ಕರಿಸುವ ಸಕಾರಾತ್ಮಕ ಕ್ರಿಯೆಗೂ ಅನ್ವಯವಾಗುತ್ತದೆ.

ಜಾತಿ ಕೋಟಾಗಳ ಮಿತಿಯು ಮೊದಲಿಗೆ ಮುನ್ನೆಲೆಗೆ ಬಂದಿದ್ದು, ೧೯೫೦ರ ದಶಕದಲ್ಲಿ ಅದನ್ನು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳನ್ನೂ ಮೀರಿ ಇತರೆ ಹಿಂದುಳಿದ ವರ್ಗಗಳಿಗೆ ವಿಸ್ತರಿಸುವ ಪ್ರಯತ್ನ ಮಾಡಿದಾಗ. ಖಂಡಿತವಾಗಿಯೂ, ಎಲ್ಲ ಸಕಾರಾತ್ಮಕ ಕ್ರಿಯೆಗಳಲ್ಲೂ ಅಂತರ್‌ವೈರುಧ್ಯಗಳಿದ್ದೇ ಇರುತ್ತವೆ, ಏಕೆಂದರೆ ಅದು ಗುಂಪುಗಳ ನಡುವಿನ ಅಧಿಕಾರ ಸಮೀಕರಣದ ಯಥಾಸ್ಥಿತಿಯನ್ನು ಬದಲಿಸಲು ಬಯಸುತ್ತದೆ. ಇಂತಹ ಚರ್ಚಾಂಶಗಳೇ ರಾಜಕೀಯದ ಸತ್ವವನ್ನು

ರೂಪಿಸುತ್ತವೆ ಹಾಗಾಗಿ ಕೇವಲ ಉತ್ತಮವಾದ ನೀತಿಯ ವಿನ್ಯಾಸಗೊಳಿಸುವಿಕೆಯು ಇಂತಹ ವಿವಾದಗಳನ್ನು ಬಗೆಹರಿಸುವುದಿಲ್ಲ. ಇದಕ್ಕೆ ಪ್ರತಿಯಾಗಿ ಕೆಟ್ಟ ನೀತಿಯ ವಿನ್ಯಾಸಗೊಳಿಸುವಿಕೆಯು ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸುತ್ತದೆ. ಏಕೆಂದರೆ ಅದಕ್ಕೆ ತೆರಬೇಕಾದ ರಾಜಕೀಯ ಬೆಲೆಯು ಅಗತ್ಯಕ್ಕಿಂತ ಹೆಚ್ಚಾಗಿರುತ್ತದೆ ಮತ್ತು ಅದರ ಸಾಮಾಜಿಕ ಅನುಕೂಲಗಳು ಒಂದೋ ಅತ್ಯಂತ ಕನಿಷ್ಟ ಮಟ್ಟದ್ದಾಗಿರುತ್ತದೆ ಇಲ್ಲವೆ ಗುರಿಯು ತಪ್ಪಾಗಿರುತ್ತದೆ ಅಥವಾ ಈ ಎರಡೂ ಆಗಿರುತ್ತದೆ. ಹಾಗಾಗಿ, ಸಾಮಾಜಿಕ ಉದ್ದೇಶವನ್ನು ಸಾಧಿಸುವ ಅದರ ಪ್ರಾಥಮಿಕ ಉದ್ದೇಶವನ್ನೂ (ಉದಾಹರಣೆಗೆ, ಸಮಾನ ಅವಕಾಶ ಅಥವಾ ನ್ಯಾಯಯುತವಲ್ಲದ ಅಸಮಾನತೆಗಳ ನಿವಾರಣೆ) ಮೀರಿ ನೀತಿಯ ವಿನ್ಯಾಸಗೊಳಿಸುವಿಕೆಯು ಅನಿವಾರ್ಯವಾಗಿ ತೆರಬೇಕಾದ ಬೆಲೆಯನ್ನು ಕನಿಷ್ಟಗೊಳಿಸುವ ಮತ್ತು ಸಂಭಾವ್ಯ ಅನುಕೂಲಗಳನ್ನು ಗರಿಷ್ಟಗೊಳಿಸುವ ಮೂಲಕ ದಕ್ಷತೆಯನ್ನು ಖಾತ್ರಿಗೊಳಿಸುವಂತಹ ಮುಖ್ಯವಾದ ಜವಾಬ್ದಾರಿಯನ್ನು ವಹಿಸಬೇಕಾಗುತ್ತದೆ.

ಎರಡನೆಯ ಹಂತದ ಈ ಉದ್ದೇಶದ ಬಗ್ಗೆ ಸಾಕಷ್ಟು ಗಮನವನ್ನು ಹರಿಸಿಲ್ಲ ಮತ್ತು ಈ ಕೊರತೆಯು ಅದರ ಪ್ರಾಥಮಿಕ ಗುರಿಯನ್ನು ಸಾಧಿಸುವುದರ ಮೇಲೆ ಪರಿಣಾಮ ಬೀರುತ್ತದೆ ಎಂದು ನಾವು ನಂಬಿದ್ದೇವೆ. ಈ ಲೇಖನದಲ್ಲಿ ನಾವು ಜಾತಿ ಕೋಟಾದ ಮೂಲ ಮಾದರಿಗೆ ಒಂದು ಕಾರ್ಯಸಾಧ್ಯ ಪರ್ಯಾಯದ ಸಚಿತ್ರ ಉದಾಹರಣೆಯನ್ನು ಒದಗಿಸುವ ಪ್ರಯತ್ನವನ್ನು ಮಾಡುತ್ತೇವೆ. ಈ ಕ್ಷೇತ್ರದಲ್ಲಿ ನೀತಿಯ ವಿನ್ಯಾಸಗೊಳಿಸುವಿಕೆಯು ಯಾವ ವಿಸ್ತೃತ ಗುರಿಯ ನಿಟ್ಟಿನಲ್ಲಿ ಮುಂದುವರೆಯಬೇಕು ಎಂದು ನಾವು ಬಯಸಿದ್ದೇವೆಯೊ ಅದಕ್ಕೆ ಇಲ್ಲಿ ಹೆಚ್ಚು ಒತ್ತನ್ನು ನೀಡಲಾಗಿದೆ. ನಮ್ಮ ಯೋಜನೆಯ ನಿರ್ದಿಷ್ಟ ವಿವರಗಳು ಪರೀಕ್ಷಾರ್ಥಕವಾಗಿವೆ ಮತ್ತು ಕೇವಲ ಒಂದು ಮೂರ್ತ ಉದಾಹರಣೆಯ ರೂಪದಲ್ಲಿವೆ. ಮುಂದಿನ ಭಾಗವು ಇತರೆ ಹಿಂದುಳಿದ ವರ್ಗಗಳ ನಿರ್ದಿಷ್ಟತೆಯನ್ನು ಮತ್ತು ನೀತಿಯ ವಿನ್ಯಾಸಗೊಳಿಸುವಿಕೆಯಲ್ಲಿ ಅವು ಒಡ್ಡುವ ಸವಾಲುಗಳನ್ನು ಸಂಕ್ಷಿಪ್ತವಾಗಿ ಚರ್ಚಿಸುತ್ತವೆ. ನಂತರದ ಭಾಗದಲ್ಲಿ ಗಣ್ಯ ವೃತ್ತಿಪರ ಶಿಕ್ಷಣದಲ್ಲಿ ಇತರೆ ಹಿಂದುಳಿದ ವರ್ಗಗಳಿಗೆ ಮೀಸಲಾತಿಯನ್ನು ನೀಡುವ ಭಾರತ ಸರಕಾರದ ಇತ್ತೀಚಿನ ನಿರ್ಣಯವನ್ನು ಚರ್ಚಿಸಲಾಗುತ್ತದೆ. ಸಾಧಾರವಾದ ಮತ್ತು ಬಹು-ಆಯಾಮಗಳುಳ್ಳ ದೃಷ್ಟಿಕೋನಕ್ಕೆ ನಾವು ಒತ್ತು ಕೊಡುತ್ತಿರುವುದರಿಂದ ಮೂರನೆ ಭಾಗದಲ್ಲಿ ಪರ್ಯಾಯವಾದ ವಿನ್ಯಾಸಕ್ಕೆ ಆಧಾರವಾಗಿರುವ ಲಭ್ಯ ಸ್ಥೂಲ-ಅಂಕಿಅಂಶಗಳ ಉದಾಹರಣೆಗಳನ್ನು ಪರಿಗಣಿಸಲಾಗುತ್ತದೆ. ನಾಲ್ಕನೆ ಭಾಗವು ಗುಂಪು ಹಾಗೂ ವ್ಯಕ್ತಿಗತ ಇವೆರಡರ ಅನನುಕೂಲತೆಗಳನ್ನು ಹೇಗೆ ಎದುರಿಸಬಹುದು ಎಂದು ತೋರಿಸುವ ಪ್ರಯತ್ನದಲ್ಲಿ ನಮ್ಮ ಮಾದರಿಯ ಮೂಲ ಲಕ್ಷಣಗಳನ್ನು ವಿವರಿಸಲಾಗುತ್ತದೆ. ಮುಕ್ತಾಯದ ಸಂಕ್ಷಿಪ್ತ ವಿಭಾಗವು ಪ್ರಸ್ತುತಪಡಿಸಲಾದ ಮಾದರಿಯ ನಿರ್ದಿಷ್ಟ ಲಕ್ಷಣಗಳು ಮತ್ತು ಸಂಭಾವ್ಯ ಅನುಕೂಲಗಳ ಸಾರಾಂಶವನ್ನು ತಿಳಿಸುತ್ತದೆ.

## ಸಕಾರಾತ್ಮಕ ಕ್ರಿಯೆ ಹಾಗೂ ಇತರೆ ಹಿಂದುಳಿದ ವರ್ಗಗಳು

ಪ್ರಾರಂಭದ ದಿನಗಳಿಂದಲೂ ಇತರೆ ಹಿಂದುಳಿದ ವರ್ಗಗಳ ವಿಭಾಗವು ವಿವಾದಾತ್ಮಕವಾಗಿದೆ. ಇದಕ್ಕೆ ಮುಖ್ಯ ಕಾರಣವೆಂದರೆ ಜಾತಿ ಹಾಗೂ ಹಿಂದುಳಿದಿರುವಿಕೆಯ ನಡುವಿನ - ಮತ್ತು ಇವೆರಡರ ಮತ್ತು ಪ್ರಭುತ್ವದ ವಿಶೇಷ ಸವಲತ್ತುಗಳನ್ನು ನೀಡುವುದರ ನಡುವಿನ - ಸಂಬಂಧದಂತಹ ಜಟಿಲ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಲು ಇದು ನೆಲೆಯಾಗಿದ್ದು. ಪರಿಶಿಷ್ಟ ಜಾತಿಯ ಹಿಂದುಳಿದಿರುವಿಕೆಯು ಅಸ್ಪೃಶ್ಯತೆಯನ್ನು ಆಧರಿಸಿದೆ. ಈ ನಡವಳಿಕೆಯಲ್ಲಿ ಎಷ್ಟೇ ಭಿನ್ನತೆಗಳಿದ್ದರೂ (ವಿಶೇಷವಾಗಿ ಉತ್ತರ ಹಾಗೂ ದಕ್ಷಿಣದ ಎಲ್ಲೆಡೆಯಲ್ಲಿ) ಅದರ ಬಗ್ಗೆ ಯಾವುದೇ ಆಕ್ಷೇಪಕ್ಕೆ ಆಸ್ಪದ ಕೊಡದಷ್ಟು ಸ್ಪಷ್ಟವಾಗಿತ್ತು ಮತ್ತು ಪರಿಗಣಿಸಲೇಬೇಕಾದುದಾಗಿತ್ತು. ಪರಿಶಿಷ್ಟ ಪಂಗಡಗಳೂ ಕೂಡ – ಸಾಮಾನ್ಯವಾಗಿ ಕಂಡುಬರುವ ಹಿಂದೂ ಸಮಾಜದ ಮುಖ್ಯವಾಹಿನಿಯಿಂದ ಪ್ರಾದೇಶಿಕ (ಇಲ್ಲದಿದ್ದಲ್ಲಿ, ಸದಾ ಸಾಮಾಜಿಕ) ಪ್ರತ್ಯೇಕತೆ  ಮತ್ತು/ಅಥವಾ ಅವುಗಳ ನಿರ್ವಿವಾದಿತ ಬಡತನ ಒಂದು ಸ್ಥಿರವಾದ ವ್ಯಾಖ್ಯಾನವನ್ನು ಅವುಗಳಿಗೆ ನೀಡಿತು. ಅಷ್ಟಲ್ಲದೆ ಇವೆರಡು ಪರಿಶಿಷ್ಟ ಗುಂಪುಗಳಿಗೆ ಇರುವ ಪರಿಹಾರಾರ್ಥ ತಾರತಮ್ಯದ ಹಕ್ಕನ್ನು, - ಪ್ರಾರಂಭದಲ್ಲಿ ಒಲ್ಲದ ಮನಸ್ಸಿನಿಂದ ಕೊಟ್ಟಿರುವುದಾದರೂ – ೧೯೯೦ರಲ್ಲಿ ಮಂಡಲ್ ಆಯೋಗದ ದಳ್ಳುರಿ ಏರುವವರೆಗೆ, ಎಂದೂ ಕೂಡ ಗಂಭೀರವಾಗಿ ಪ್ರಶ್ನಿಸಲಾಗಿಲ್ಲ. ಇತರೆ ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದಂತೆ ಇದು ಭಿನ್ನವಾಗಿತ್ತು. ಅದರ ವ್ಯಾಖ್ಯಾನ (ಯಾರನ್ನು ಒಳಗೊಳ್ಳಬೇಕು ಮತ್ತು ಏಕೆ), ಮತ್ತು ಅದರ ಇಂಗಿತಗಳನ್ನು (ಒದಗಿಸಲಾಗುವ ಹಕ್ಕುಗಳ ಸ್ವರೂಪ ಮತ್ತು ಅದರ ವ್ಯಾಪ್ತಿ) ತೀವ್ರವಾಗಿ ಪ್ರಶ್ನಿಸಲಾಯಿತು. ಮೇ

೨೦೦೬ರ ಮೀಸಲಾತಿ ವಿರೋಧಿ ಚಳುವಳಿಯು ಅಂತಹ ವಿವಾದದ ಅತ್ಯಂತ ಇತ್ತೀಚಿನ ಉದಾಹರಣೆಯಾಗಿದೆ ಅಷ್ಟೇ.

ಇತರೆ ಹಿಂದುಳಿದ ಜಾತಿಗಳು ಜಾತಿ ಹಾಗೂ ವಿಶೇಷ ಸೌಲಭ್ಯ ಅಥವಾ ವಿಶೇಷ ಸೌಲಭ್ಯರಾಹಿತ್ಯದ ನಡುವಿನ ಸಂಕೀರ್ಣವಾದ ಸಂಬಂಧವನ್ನು ಒಳಗೊಂಡಿವೆ, ಹಾಗಾಗಿ ಸಕಾರಾತ್ಮಕ ಕ್ರಿಯೆಯ ನೀತಿಗೆ ಸವಾಲು ಹಾಗೂ ಅವಕಾಶಗಳು ಇವೆರಡನ್ನೂ ಮುಂದಿಡುತ್ತವೆ. ಮುಂದುವರಿದ ಜಾತಿಗಳಿಗೆ ಮಾತ್ರ ವಿಶೇಷ ಸೌಲಭ್ಯವನ್ನು ಒದಗಿಸಿದ್ದು, ಪ.ಜಾ. ಹಾಗೂ ಪ.ಪಂಗಡಗಳನ್ನು ಅವಕಾಶವಂಚಿತವಾಗಿಸಿದೆ ಎನ್ನುವ ರೀತಿಯಲ್ಲಿ ಜಾತಿಯನ್ನು ನೋಡುತ್ತಿರುವುದರಿಂದ ಇತರೆ ಹಿಂದುಳಿದ ಜಾತಿಗಳಿಗೆ ಇವೆರಡನ್ನೂ ನೀಡುತ್ತಿರುವ ಸಂಭಾವ್ಯತೆ ಇದೆ. ಹಾಗಾಗಿ ಇತರೆ ಹಿಂದುಳಿದ ಜಾತಿಗಳು (ಇ.ಹಿಂ.ಜಾ.) ಅನುಭವಿಸುತ್ತಿರುವ ಸಾಪೇಕ್ಷ ಅನನುಕೂಲತೆಗಳ ಸ್ವರೂಪ ಮತ್ತು ಪ್ರಮಾಣವನ್ನು ಹಿಡಿದಿಡಲು ನೀತಿಯ ವಿನ್ಯಾಸಗೊಳಿಸುವಿಕೆಯು ಹೆಚ್ಚು ಸೂಕ್ಷ್ಮತೆಯನ್ನು ಒಳಗೊಳ್ಳಬೇಕಾಗುತ್ತದೆ. ನೀತಿಯ ವ್ಯಾಪ್ತಿಯನ್ನು ವಿಸ್ತರಿಸಲು ಈ ಅವಕಾಶವನ್ನು ಉಪಯೋಗಿಸಿಕೊಳ್ಳುವುದರ ಬದಲಾಗಿ ಇ.ಹಿಂ.ಜಾಗಳನ್ನು ಉಪಗುಂಪುಗಳಾಗಿ ವಿಂಗಡಿಸಿ ಅವುಗಳಿಗೆ ಅದೇ ಕೋಟಾ ತರ್ಕವನ್ನೇ ಮರುಅನ್ವಯ ಮಾಡುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಅನನುಕೂಲತೆಗಳ ಪ್ರಮಾಣವನ್ನು ಮತ್ತು ಬಹುವಿಧದ ಅನನುಕೂಲತೆಗಳನ್ನು ಹಿಡಿದಿಡಲು ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸುವ ನೀತಿಯ ವಿನ್ಯಾಸಗೊಳಿಸುವಿಕೆಯು ಒಂದು ಪರ್ಯಾಯ ದೃಷ್ಟಿಕೋನವಾಗಿರುತ್ತದೆ. ಇ,ಹಿಂ,ಜಾ ವರ್ಗವು ಸಕಾರಾತ್ಮಕ ಕ್ರಿಯೆಯ ಅನೇಕ ಮಾನದಂಡಗಳಲ್ಲಿ ಜಾತಿಯು ಕೇವಲ ಒಂದು ಮಾನದಂಡವಾಗಿರುವ ಹೆಚ್ಚು ಸಮಗ್ರವಾದ ನೀತಿಯ ಚೌಕಟ್ಟಿನೆಡೆಗೆ ಪರಿವರ್ತನೆಯನ್ನು ಪ್ರವೃತ್ತಗೊಳಿಸುತ್ತದೆ.

## ಮಂಡಲ್ II: ಕ್ರಮಿಸಿರದ ಹಾದಿ

ಚಿಂತನೆ ಮತ್ತು ಸೂಕ್ಷ್ಮತೆಗಳನ್ನು ಆರೋಪಿಸಲಾಗದಿದ್ದರೂ ಉನ್ನತ ಹಾಗೂ ವೃತ್ತಿಪರ ಗಣ್ಯ ಸಂಸ್ಥೆಗಳಲ್ಲಿ ಇ.ಹಿಂ.ಜಾ.ಗಳಿಗೆ ಮೀಸಲಾತಿಯನ್ನು ಪರಿಚಯಿಸುತ್ತಿರುವ ಸರಕಾರದ ಪ್ರಯತ್ನವು ಉನ್ನತ ಶಿಕ್ಷಣ ಹಾಗೂ ಮಧ್ಯಮವರ್ಗ ಉದ್ಯೋಗಗಳು ಇ.ಹಿಂ.ಜಾ.ಗಳಿಗೆ ಎಟಕುವಂತೆ ಮಾಡುವ ಸಾಧ್ಯತೆಯನ್ನು ಹೆಚ್ಚು ಮಾಡುತ್ತದೆ. ಸಮಕಾಲೀನ ಭಾರತದಲ್ಲಿ ಶೈಕ್ಷಣಿಕ ಅಸಮಾನತೆಗಳ ಬಗ್ಗೆ ಲಭ್ಯವಿರುವ ಪುರಾವೆಗಳು (ಈ ಲೇಖನದಲ್ಲಿ ಮುಂದೆ ವಿಶ್ಲೇಷಿಸಲಾಗುವ) ಒಟ್ಟಾರೆಯಾಗಿ ಇ.ಹಿಂ.ಜಾ.ಗಳು, ಒಟ್ಟು ಮುಂದುವರೆದ ಜಾತಿಗಳಿಗೆ ಹೋಲಿಸಿದಾಗ, ಖಂಡಿತವಾಗಿಯೂ ಹೆಚ್ಚು ಅನನುಕೂಲತೆಗಳನ್ನು ಎದುರಿಸುತ್ತಿವೆ ಎಂದು ತೋರಿಸುತ್ತವೆ. ಹಾಗಾಗಿ, ಸರಕಾರವು ಅಳವಡಿಸಿಕೊಂಡಿರುವ ಜಾತಿ-ಗುಂಪುಗಳ ದೃಷ್ಟಿಕೋನವು ಕೂಡ ಈ ಅಸಮಾನತೆಗಳಲ್ಲಿ ಕೆಲವನ್ನು ಕಡಿಮೆ ಮಾಡಲು ಸಹಾಯ ಮಾಡುತ್ತದೆ. ಇ.ಹಿಂ.ಜಾ.ಗಳ ವ್ಯಾಪ್ತಿಯ ಸಮುಚ್ಚಯವನ್ನು ವಿಸ್ತೃತಗೊಳಿಸಿ ಸರಕಾರಿ ಹುದ್ದೆಗಳಲ್ಲಿನ ಈಗಿನ ಮೀಸಲಾತಿ ಯೋಜನೆಯ ಲಾಭವನ್ನು ಪಡೆದುಕೊಳ್ಳಲು ಅನುಕೂಲವಾಗುವಂತೆ ವ್ಯಾಪ್ತಿಯನ್ನು ಹಿಗ್ಗಿಸಲು ಅದು ಸಹಾಯ ಮಾಡಬೇಕು. ಹಾಗಾಗಿ ಏನೂ ಇಲ್ಲದೆ ಇರುವುದಕ್ಕಿಂತ ಅಂದಾಜಿನ ಜಾತಿ ಕೋಟಾ ಉತ್ತಮವಾದುದು.

ಆದರೆ ಸಕಾರಾತ್ಮಕ ಅಂಶಗಳ ಬಗೆಗಿನ ಮೆಚ್ಚುಗೆ ಅದಕ್ಕೆ ದೀರ್ಘ ಕಾಲದಲ್ಲಿ ತೆರಬೇಕಾದ ಬೆಲೆಯ ಬಗ್ಗೆ ನಮ್ಮನ್ನು ಅಂಧರನ್ನಾಗಿಸಬಾರದು. ಜಾತಿ-ಗುಂಪಿನ ಒಂದೇ ಆಯಾಮದ ಕೋಟಾ ಈ ಯೋಜನೆಯನ್ನು ನಿಷ್ಫಲಗೊಳಿಸುತ್ತದೆ. ಇ.ಹಿಂ.ಜಾ.ಯಲ್ಲಿರುವ ಸಾಪೇಕ್ಷವಾಗಿ ಉತ್ತಮ ಸ್ಥಿತಿಯಲ್ಲಿರುವ 'ಮೇಲ್ವರ್ಗ'ದ ಕುಟುಂಬಗಳು ಬಹಳಷ್ಟು ಸೌಲಭ್ಯಗಳನ್ನು ತಮ್ಮದಾಗಿಸಿಕೊಳ್ಳುತ್ತವೆ. ಪ್ರಾದೇಶಿಕವಾಗಿ ಹೇಳುವುದಾದರೆ ಸಕಾರಾತ್ಮಕ ಕ್ರಿಯೆಯ ಮತ್ತು ಹಿಂದುಳಿದ ಜಾತಿಗಳ ಬಲವಾದ ಚಳುವಳಿಯ ದೀರ್ಘವಾದ ಇತಿಹಾಸವನ್ನುಳ್ಳ ದಕ್ಷಿಣ ಭಾರತದ ಮತ್ತು ಇತರೆ ರಾಜ್ಯಗಳ ವಿದ್ಯಾರ್ಥಿಗಳು ಈ ಯೋಜನೆಯ ಲಾಭವನ್ನು ಪಡೆಯಲು ಹೆಚ್ಚು ಅನುಕೂಲಕರ ಸ್ಥಿತಿಯಲ್ಲಿರುತ್ತಾರೆ. ಈ ಅವಕಾಶಗಳಲ್ಲಿ ಬಹಳಷ್ಟು ಪುರುಷರ ಪಾಲಾಗುತ್ತದೆ ಎನ್ನುವುದನ್ನು ಹೇಳಬೇಕಾಗಿಲ್ಲ. ಲಿಂಗ ಅಸಮಾನತೆಯು ಮೇಲ್ಜಾತಿಯ ಹಿಂದೂಗಳಿಗಿಂತ ಇ.ಹಿಂ.ಜಾ.ಯವರಲ್ಲಿ ಹೆಚ್ಚಿರುತ್ತದೆ. ಯೋಜನೆಯ ಗುರಿಯಲ್ಲಿನ ಈ ವಿಫಲತೆಯು ಆಳವಾದ ಅಸಮಾಧಾನವನ್ನು ಹುಟ್ಟುಹಾಕುತ್ತದೆ. ಹೊಸ ಮೀಸಲಾತಿಯಿಂದಾಗಿ ಪ್ರವೇಶಾವಕಾಶವನ್ನು ಪಡೆಯುತ್ತಿರುವ ಇ.ಹಿಂ.ಜಾಗಳವರಿಗಿಂತ ತಾವು ಹೆಚ್ಚು ಅನನುಕೂಲ ಸ್ಥಿತಿಯಲ್ಲಿದ್ದೇವೆ ಎಂದು ಅನೇಕ ಇ.ಹಿಂ.ಜಾ.ಯವರಲ್ಲದ ವಿದ್ಯಾರ್ಥಿಗಳಿಗೆ ಹಾಗೂ ಅವರ ಪರಿವಾರಕ್ಕೆ ಸರಿಯಾಗಿಯೆ ಅನಿಸಬಹುದು.

ಈ ಲೇಖನದಲ್ಲಿ ತೋರಿಸಿರುವ ಹಲವಾರು ಅನನುಕೂಲತೆಗಳು ಈ ಕೆಲವು ಅಭಿಪ್ರಾಯಗಳನ್ನು ಬೆಂಬಲಿಸಬಹುದು.

ಯೋಜನೆಯ ಮಾನದಂಡದ ಮಿತಿಯೊಳಗಿನಿಂದಲೆ ಈಗಲೂ ಪರಿಸ್ಥಿತಿಯನ್ನು ಬಗೆಹರಿಸಿ ತೆರಬೇಕಾದ ಬೆಲೆಗಳಲ್ಲಿ ಕೆಲವನ್ನು ಕಡಿಮೆ ಮಾಡಬಹುದೆ? ಪ್ರಕಟವಾಗಿರುವ ಯೋಜನೆಯು ಅದರಲ್ಲಿ ಒಂದು ಸಾಧ್ಯತೆಯನ್ನು ಅಂದರೆ ಇ.ಹಿಂ.ಜಾ.ಗಳಲ್ಲದ ಇತರ ಜಾತಿಗಳ ಅನನುಕೂಲತೆಗಳನ್ನು ಗುರುತಿಸುವ ಸಾಧ್ಯತೆಯನ್ನು ತಳ್ಳಿಹಾಕುತ್ತದೆ. ಆದರೆ ಉನ್ನತ ಶಿಕ್ಷಣದಲ್ಲಿ ಮೀಸಲಾತಿಯ ಅನುಷ್ಠಾನದ ವೀರಪ್ಪ ಮೊಯಿಲಿ ಮೇಲ್ವಿಚಾರಣಾ ಸಮಿತಿಯು ಇ.ಹಿಂ.ಜಾ. ಮೀಸಲಾತಿಯನ್ನು ಹೆಚ್ಚು ದಕ್ಷವಾಗಿ ನಿರ್ವಹಿಸುವುದನ್ನು ಖಾತ್ರಿಗೊಳಿಸಲು ಪ್ರಯತ್ನಿಸಬಹುದು. ಒಂದು, ಇ.ಹಿಂ.ಜಾ.ಯೊಳಗಿನ 'ಕೆನೆಪದರ' ಗುಂಪು ಹೊಸ ಮೀಸಲಾತಿಯ ಅತ್ಯಂತ ಕಡಿಮೆ ಲಾಭವನ್ನು ಪಡೆಯುವಂತೆ ಮಾಡುವುದನ್ನು ಇದು ಶಿಫಾರಸು ಮಾಡಬಹುದು. ಹಿಂದುಳಿದ ವರ್ಗಗಳ ರಾಷ್ಟ್ರೀಯ ಸಮಿತಿಯು ಹೇಳಿರುವ 'ಕೆನೆಪದರ'ನ ವ್ಯಾಖ್ಯಾನವು ಹುದ್ದೆಯ ಮೀಸಲಾತಿಗೆ ಸಂಬಂಧಿಸಿದಂತೆ ಈಗಾಗಲೆ ಚಾಲ್ತಿಯಲ್ಲಿದೆ. ಇ.ಹಿಂ.ಜಾ.ಗಳ ಕೋಟಾದಲ್ಲಿ ಭರ್ತಿಯಾಗದ ಸ್ಥಾನಗಳನ್ನು ಮಾತ್ರ "ಕೆನೆಪದರದ" ಇ.ಹಿಂ.ಜಾತಿಗಳ ಅಭ್ಯರ್ಥಿಗಳಿಗೆ(ಸಾಮಾನ್ಯ ವರ್ಗಕ್ಕೆ ವರ್ಗಾಯಿಸುವುದರ ಬದಲಾಗಿ) ಒದಗಿಸಲಾಗುತ್ತದೆ ಎನ್ನುವ ಸೂಚನೆಯೊಂದಿಗೆ ಇದನ್ನು ವೃತ್ತಿಪರ ಶಿಕ್ಷಣಕ್ಕೆ ಅನ್ವಯಿಸಬಹುದು. ಎರಡನೆಯದಾಗಿ, ಸಮಿತಿಯು ಇ.ಹಿಂ.ಜಾ.ಗೆ ಇರುವ ಶೇಕಡಾ ೨೭ರಷ್ಟು ಕೋಟಾವನ್ನು ಇ.ಹಿಂ.ಜಾ.ಗಳಲ್ಲಿರುವ "ಮೇಲ್ವರ್ಗ" ಮತ್ತು "ಕೆಳವರ್ಗ"ದವರಿಗೆ ಪುನರ್ವಿಭಜಿಸಬಹುದು ಎಂದು ಶಿಫಾರಸು ಮಾಡಬಹುದು. ಅಂತಹ ಪುನರ್ವಿಭಜನೆಗಳು ಈಗಾಗಲೆ ಹಲವು ರಾಜ್ಯಗಳಲ್ಲಿ ಇವೆ ಮತ್ತು ಇತರೆ ರಾಜ್ಯಗಳಲ್ಲಿಯೂ ಇ.ಹಿಂ.ಜಾ.ಗಳ ಮೇಲ್ವರ್ಗ ಮತ್ತು ಕೆಳವರ್ಗದವರ ಪಟ್ಟಿಯನ್ನು ತಯಾರಿಸುವಂತೆ ಕಾನೂನುಬದ್ಧ ಸಂಸ್ಥೆಯಾದ ಹಿಂದುಳಿದ ವರ್ಗಗಳ ರಾಷ್ಟ್ರೀಯ ಸಮಿತಿಯನ್ನು ಕೋರಬಹುದು. ಬಹುಪಾಲು ಅವಕಾಶವನ್ನು ಜಾತಿ-ಗುಂಪು ಆಧಾರಿತ ಮೀಸಲಾತಿಯನ್ನು ಇತರ ಜಾತಿಗಳಿಗಿಂತ ಉತ್ತಮ ಸ್ಥಿತಿಯಲ್ಲಿರುವ ಕೆಲವೇ ಕೆಲವು ಭೂಮಾಲಿಕ ಇ.ಹಿಂ.ಜಾ.ಗಳು ಕಬಳಿಸದಂತೆ ಇದು ರಕ್ಷಿಸುತ್ತದೆ. ಪ.ಜಾ.ಯ ಮೇಲಿನ ಹಂತದ ಸಮುದಾಯಗಳಿಗಿಂತ ಹೀನ ಸ್ಥಿತಿಯಲ್ಲಿರುವ ಇ.ಹಿಂ.ಜಾ.ಗಳ ತಳ ಸಮುದಾಯಗಳು, ಮುಖ್ಯವಾಗಿ ಕುಶಲಕರ್ಮಿ ಮತ್ತು ಸೇವಾ ಸಮುದಾಯಗಳು ಈ ಹೊಸ ಯೋಜನೆಯ ಲಾಭವನ್ನು ಪಡೆಯುವಂತೆ ಮಾಡುವುದನ್ನೂ ಕೂಡ ಇದು ಖಾತ್ರಿಗೊಳಿಸುತ್ತದೆ. ಅಲ್ಲದೆ ಇ.ಹಿಂ.ಜಾ.ಗಳ ಕೆಳವರ್ಗದಿಂದ ಭರ್ತಿಯಾಗದೆ ಉಳಿದಿರುವ ಕೋಟಾವನ್ನು ಇ.ಹಿಂ.ಜಾ.ಗಳಲ್ಲಿರುವ ಮೇಲ್ವರ್ಗವು ಪಡೆಯುವಂತೆ ಇದು ಮಾಡುತ್ತದೆ. ಮೂರನೆಯದಾಗಿ, ಇ.ಹಿಂ.ಜಾ.ಗಳ ಮಹಿಳೆಯರು ಈ ಕೋಟಾದ ಸಾಕಷ್ಟು ಅವಕಾಶವನ್ನು ಪಡೆಯುವಂತೆ ಸಮಿತಿಯು ಕೆಲವು ವಿಶೇಷ ಅವಕಾಶಗಳನ್ನು ಸೂಚಿಸಬಹುದು. ಅಂತಿಮವಾಗಿ ಮೇಲಿನ ಹಂತದ 'ವಿಶೇಷ ತಜ್ಞತೆಯ ಉನ್ನತ ಹಂತದ ವೃತ್ತಿಪರ ಕೋರ್ಸುಗಳಿಗೆ' ಅವಕಾಶವನ್ನು ಪಡೆಯಬಯಸುವ ಇ.ಹಿಂ.ಜಾ. ಅಭ್ಯರ್ಥಿಗಳಿಗೆ ಅರ್ಹತೆಯ ಕೆಲವು ಕನಿಷ್ಟ ಮಿತಿಗಳನ್ನು ಸಮಿತಿಯು ವಿಧಿಸಬಹುದಾಗಿದೆ (ಉದಾಹರಣೆಗೆ, ಸಾಮಾನ್ಯ ವರ್ಗದಲ್ಲಿ ಪ್ರವೇಶವನ್ನು ಪಡೆದಿರುವ ಕೊನೆಯ ವಿದ್ಯಾರ್ಥಿಯ ಮೂರನೆ ಎರಡು ಭಾಗದಷ್ಟು ಅಂಕಗಳು).

ಹೆಚ್ಚು ದೀರ್ಘಾವಧಿ ಕ್ರಮಗಳ ಬಗ್ಗೆ ಆಲೋಚಿಸುವ ಅಗತ್ಯವಿದೆ. ಜಾತಿ ಹಾಗೂ ಅನನುಕೂಲತೆಗಳ ಇತರ ಮೂಲಗಳ ಬಗ್ಗೆ ವಿಶ್ವಾಸಾರ್ಹ ದತ್ತಾಂಶಗಳ ಸೃಷ್ಟಿಯನ್ನು ಸರಕಾರವು ಖಾತ್ರಿಪಡಿಸಬೇಕಾಗಿದೆ. ಸಾರ್ವಜನಿಕ ಮತ್ತು ಖಾಸಗಿ ಇವೆರಡನ್ನೂ ಒಳಗೊಂಡಂತೆ ಸಂಘಟಿತ ವಲಯದಲ್ಲಿ ಉನ್ನತ ಶಿಕ್ಷಣ ಸಂಸ್ಥೆಗಳು ಮತ್ತು ಹುದ್ದೆಯಲ್ಲಿರುವವರ ಸಾಮಾಜಿಕ ವ್ಯಕ್ತಿಚಿತ್ರದ ರಾಷ್ಟ್ರಮಟ್ಟದ ಸಮೀಕ್ಷೆಯನ್ನು ಮಾಡುವಂತೆ ರಾಷ್ಟ್ರೀಯ ಮಾದರಿ ಸಮೀಕ್ಷಾ ಕಛೇರಿ (NSSO) ಅಥವಾ ಇತರ ಸ್ವತಂತ್ರ ಸಂಸ್ಥೆಯನ್ನು ಕೋರಬಹುದು. ಅಂತಹ ದತ್ತಾಂಶಗಳ ಕೊರತೆಯು ಭವಿಷ್ಯದಲ್ಲಿ ಹೆಚ್ಚು ಸದೃಢ ಮತ್ತು ಸೂಕ್ತ ನೀತಿಯನ್ನು ವಿನ್ಯಾಸಗೊಳಿಸುವ ನಿಟ್ಟಿನ ಪರಿವರ್ತನೆಯ ಹಾದಿಯಲ್ಲಿರುವ ಒಂದು ದೊಡ್ಡ ತೊಡಕಾಗಿ ಪರಿಣಮಿಸಿದೆ. ಎರಡನೆಯದಾಗಿ, ಸಾರ್ವಜನಿಕ ಸಂಸ್ಥೆಗಳ ಭಿನ್ನತೆಯ ರೂಪರೇಖೆಯನ್ನು ನಿಯಮಿತವಾಗಿ ಉಸ್ತುವಾರಿ ಮಾಡಿ ಅದನ್ನು ಉತ್ತಮಪಡಿಸುವ ಕುರಿತು ಸರಕಾರಕ್ಕೆ ಸಲಹೆಯನ್ನು ನೀಡಲು ವೈವಿಧ್ಯತೆ ಹಾಗೂ ಅನನುಕೂಲತೆಗಳ ಆಯೋಗದಂತಹ ಒಂದು ಶಾಶ್ವತ ಕಾನೂನುಬದ್ಧ ಸಂಸ್ಥೆಯನ್ನು ಸ್ಥಾಪಿಸುವ ಬಗ್ಗೆ ಸರಕಾರವು ಯೋಚಿಸುವ ಕಾಲ ಬಂದಿದೆ.

## ಉತ್ತಮವಾದ ನೀತಿಯನ್ನು ವಿನ್ಯಾಸಗೊಳಿಸುವುದರೆಡೆಗೆ

ಈ ಕೆಳಗಿನ ಅಂಶಗಳನ್ನು ಅನುಸರಿಸಲು ಪ್ರಯತ್ನಿಸುವ ಮೂಲಕ ಉತ್ತಮ ಸಕಾರಾತ್ಮಕ ಕ್ರಿಯೆಯ ನೀತಿಗಳನ್ನು ವಿನ್ಯಾಸಗೊಳಿಸಬಹುದು ಎನ್ನುವುದು ನಮ್ಮ ಮೂಲ ಪ್ರತಿಪಾದನೆಯಾಗಿದೆ. (ಅ) ಪುರಾವೆಯಾಧಾರಿತ ದೃಷ್ಟಿಕೋನ; (ಆ) ಜಾತಿಯನ್ನು ಒಳಗೊಂಡಂತೆ ಆದರೆ ಅದಕ್ಕೆ ಮಾತ್ರ ಸೀಮಿತವಾಗದಿರುವ ಅನನುಕೂಲತೆಗಳ ಬಹು ಆಯಾಮಗಳಿಗೆ ಸೂಕ್ಷ್ಮಸಂವೇದನೆಯನ್ನು ಹೊಂದಿರುವುದು; (ಇ) ಅನನುಕೂಲತೆಗಳ ವಿವಿಧ ಆಯಾಮಗಳ ಅಂತರ್-ಕ್ರಿಯೆಯ ಪರಿಣಾಮಗಳ ಬಗ್ಗೆ ಸಂವೇದನೆಯನ್ನು ಹೊಂದಿರುವುದು; (ಈ) ಸಾಪೇಕ್ಷವಾದ ಅನನುಕೂಲತೆಗಳ ಪ್ರಮಾಣಗಳ ಬಗ್ಗೆ ಸಂವೇದನಾಶೀಲತೆಯನ್ನು ಹೊಂದಿರುವುದು.

ಪುರಾವೆಯಾಧಾರಿತ ದೃಷ್ಟಿಕೋನವೆಂದರೆ ಅನನುಕೂಲತೆಯನ್ನು ಕುರಿತ ಪ್ರಾಯೋಗಿಕ ಮಾಹಿತಿಯೊಂದಿಗೆ ಸ್ಪಷ್ಟ ಸಂಬಂಧವನ್ನು ಹೊಂದಿರುವ, ಸಾಮಾನ್ಯವಾಗಿ, ಸ್ಥೂಲ ಅಂಕಿಅಂಶಗಳ ಮಾದರಿಯಲ್ಲಿರುವ ಆದರೆ ಹಾಗೆಯೆ ಇರಬೇಕಾಗಿಲ್ಲದ ನೀತಿಯೊಂದರ ರೂಪರೇಷೆ ಎಂಬುದು ನಮ್ಮ ಅಭಿಪ್ರಾಯವಾಗಿದೆ. ಸಕಾರಾತ್ಮಕ ಕ್ರಿಯೆಯನ್ನು ಏಕೆ ಕೈಗೊಳ್ಳಲಾಗಿದೆ ಎಂಬುದರ ಮೂಲಭೂತ ಕಾರಣಗಳನ್ನು ಎತ್ತಿ ತೋರಿಸುವುದು ಇಂತಹ ದೃಷ್ಟಿಕೋನದ ಪ್ರಮುಖ ಪ್ರಯೋಜನವಾಗಿದೆ.– ಅಂದರೆ ವಿವಿಧ ಸಾಮಾಜಿಕ ಹಾಗೂ ಆರ್ಥಿಕ ಅನನುಕೂಲತೆಗಳು. ಇದು ಜಾತಿ ಅಥವಾ ಮತಧರ್ಮಗಳಂತಹ ಗುರುತುಗಳನ್ನು ಅನಗತ್ಯಗೊಳಿಸಲು ನೆರವಾಗುತ್ತದೆ, ಅಂದರೆ, ಕೆಲವು ಜಾತಿಗಳು ಮತ್ತು ಸಮುದಾಯಗಳು ಪರಿಹಾರಾತ್ಮಕ ತಾರತಮ್ಯಗಳಿಗೆ ಏಕೆ ಅರ್ಹವಾಗಿವೆ ಎನ್ನುವುದಕ್ಕೆ ಇದು ಒಂದು ವೈಚಾರಿಕ ವಿವರಣೆಯನ್ನು ನೀಡುತ್ತದೆ ಮತ್ತು ಅಂತಹ ಹಕ್ಕುಗಳನ್ನು ತಮಗೆ "ಹುಟ್ಟಿನಿಂದಲೆ ಬಂದ ಹಕ್ಕುಗಳು" ಎನ್ನುವ ಧೋರಣೆಯನ್ನು ಅಲ್ಲಗಳೆಯುತ್ತದೆ. ಎರಡನೆಯ ಪ್ರಮುಖ ಲಾಭವೆಂದರೆ ಪುರಾವೆಯಾಧಾರಿತ ದೃಷ್ಟಿಕೋನಗಳಿಗೆ ಅಂತರ್ಗತವಾದ ನಮ್ಯತೆಯಿದೆ – ಅವು ಸಾಪೇಕ್ಷವಾದ ಅನನುಕೂಲತೆಯ ವಿನ್ಯಾಸಗಳಲ್ಲಾಗುವ ಬದಲಾವಣೆಗಳನ್ನು ಪ್ರತಿಬಿಂಬಿಸುತ್ತವೆ ಮತ್ತು ಅದಕ್ಕೆ ಹೊಂದಿಕೊಳ್ಳುತ್ತವೆ. ಅದರಲ್ಲಿರುವ ಊನತೆ ಎಂದರೆ ಅಂತಹ ದೃಷ್ಟಿಕೋನಗಳು ದತ್ತಾಂಶವನ್ನು ಅವಲಂಬಿಸಿರುತ್ತವೆ ಮತ್ತು ದತ್ತಾಂಶ ಮೂಲಗಳ ವಿಫಲತೆಯ ಮತ್ತು ದತ್ತಾಂಶಗಳಿಗೆ ಸಿಗುವ ಅತಿಯಾದ ಮಾನ್ಯತೆಯ ಎಲ್ಲ ದುಷ್ಪರಿಣಾಮಗಳಿಗೂ ಅವು ತುತ್ತಾಗುತ್ತವೆ. ಅದೇನೆ ಇದ್ದರೂ, ಪ್ರಸ್ತುತದಲ್ಲಿ ಅದರಿಂದಾಗುವ ಅನಾನುಕೂಲಗಳಿಗಿಂತಲೂ ಅನುಕೂಲಗಳೇ ಹೆಚ್ಚು.

ಅನನುಕೂಲತೆಗಳ ಬಹು ಮೂಲಗಳೆಡೆಗೆ, ಪರಸ್ಪರ ಸಂವಹನದ ಪರಿಣಾಮಗಳೆಡೆಗೆ ಮತ್ತು ಅನನುಕೂಲತೆಗಳ ಪ್ರಮಾಣಗಳ ಬಗ್ಗೆ ಸಂವೇದನಾಶೀಲರಾಗಿರುವುದು – ಇವೆಲ್ಲ ಅಂಶಗಳೂ ಸಿದ್ಧಾಂತದಲ್ಲಿಯಲ್ಲದಿದ್ದರೂ ವಾಡಿಕೆಯಲ್ಲಿ ದತ್ತಾಂಶವನ್ನು ಅವಲಂಬಿಸಿರುತ್ತವೆ. ಪರಸ್ಪರ ಸಂವಹನದ ಪರಿಣಾಮಗಳು ಹಾಗೂ ಅನನುಕೂಲತೆಯ ಸಾಪೇಕ್ಷ ತೀವ್ರತೆಯಂತಹ ಸಂಗತಿಗಳನ್ನು ಅಳೆಯುವ ಒಂದು ಸ್ಥಿರವಾದ ಮಾಪಕವಿದ್ದಾಗ ಮಾತ್ರ ಅಂತಹ ಸಂವೇದನಾಶೀಲತೆಯನ್ನು ಬೆಳೆಸಿಕೊಳ್ಳಬಹುದು. ಇಂತಹ ಲಕ್ಷಣಗಳ ಒಳ್ಳೆಯ ಅಂಶಗಳು ಸ್ವಯಂಗೋಚರವಾಗುವಂತಹವು – ಹೆಚ್ಚು ಸೂಕ್ಷ್ಮವಾದ ಮತ್ತು ಸಮಗ್ರವಾದ ಚೌಕಟ್ಟು ಹೆಚ್ಚು ಸ್ಪಷ್ಟವಾದ ಗುರಿಯೆಡೆಗೆ ಸಾಗುವಂತೆ ಮಾಡುತ್ತದೆ ಮತ್ತು ಉಳಿದೆಲ್ಲವೂ ಸರಿಸಮವಾಗಿದ್ದಲ್ಲಿ, ಕ್ಷಿಪ್ರವಾದ ಮತ್ತು ಉತ್ತಮವಾದ ಫಲಿತಾಂಶವನ್ನು ನೀಡುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಅಂತಹ ದೃಷ್ಟಿಕೋನಗಳು ನೈತಿಕ ಪರಿಭಾಷೆಯಲ್ಲಿ ಮಾತ್ರವಲ್ಲ ಪ್ರಾಯೋಗಿಕವಾದ ದಕ್ಷತೆಯ ದೃಷ್ಟಿಯಿಂದಲೂ ಕೂಡ, ಅಂದರೆ ತೆರಬೇಕಾದ ಬೆಲೆಯನ್ನು ಕನಿಷ್ಟಗೊಳಿಸುವುದು ಮತ್ತು ಅನುಕೂಲಗಳನ್ನು ಗರಿಷ್ಟಗೊಳಿಸುವ ನಿಟ್ಟಿನಲ್ಲಿ ಹೆಚ್ಚು ಸತ್ವಯುತವಾಗಿರುತ್ತವೆ. ಇದರ ಅನನುಕೂಲತೆಯೆಂದರೆ ನೀತಿಯ ರೂಪುಗೊಳಿಸುವಿಕೆಯು ಹೆಚ್ಚು ಸಂಕೀರ್ಣವಾಗಿರುವುದು ಮತ್ತು ಸಾಂಸ್ಥಿಕ ರಚನೆಗಳು ಹೆಚ್ಚು ದುರ್ಬಲವಾಗಿರುವುದು. ಅಂತಹ ನೀತಿಗಳ ಉಸ್ತುವಾರಿಯೂ ಕೂಡ ಹೆಚ್ಚು ಕಷ್ಟಕರವಾಗಿರುತ್ತದೆ. ಆದರೆ ಈ ಮೊದಲೇ ಹೇಳಿದಂತೆ ಇದರಲ್ಲಿ ನಷ್ಟಕ್ಕಿಂತ ಲಾಭವೇ ಹೆಚ್ಚು.

ನೀತಿಯನ್ನು ರೂಪುಗೊಳಿಸುವಲ್ಲಿ ಉಪಯುಕ್ತವಾಗುವಂತಹ ಕೆಲವು ಉದಾಹರಣೆಗಳನ್ನು ಈ ಕೆಳಗೆ ನಾವು ಕೊಡುತ್ತೇವೆ. ರಾಷ್ಟ್ರೀಯ ಮಾದರಿ ಸಮೀಕ್ಷಾ ಕಛೇರಿ, ಅಭಿವೃದ್ಧಿಶೀಲ ಸಮಾಜಗಳ ಅಧ್ಯಯನ ಕೇಂದ್ರದ (CSDS) ರಾಷ್ಟ್ರೀಯ ಚುನಾವಣಾ ಅಧ್ಯಯನ ೨೦೦೪ರ ದತ್ತಾಂಶಗಳನ್ನು ಸಂಗ್ರಹಿಸಿರುವುದು ಸಚಿತ್ರ ಉದಾಹರಣೆಯನ್ನು ನೀಡುವ ಉದ್ದೇಶದಿಂದ. ಅದೇ ತರಹದ ಅಥವಾ ಸಂಬಂಧಪಟ್ಟ ಇತರ ಮೂಲಗಳಿಂದಲೂ (ಜನಸಂಖ್ಯಾ ಸಮೀಕ್ಷೆ ಅಥವಾ ರಾಷ್ಟ್ರೀಯ ಕುಟುಂಬ ಹಾಗೂ ಆರೋಗ್ಯ ಸಮೀಕ್ಷೆಯಂತಹ) ಕೂಡ ದತ್ತಾಂಶಗಳನ್ನು ಪಡೆದುಕೊಳ್ಳಬಹುದು. ಈ ಉದ್ದೇಶಕ್ಕಾಗಿ ರೀತಿನೀತಿಗಳು ಹಾಗೂ ಪ್ರಕ್ರಿಯೆಗಳನ್ನು ರೂಪಿಸಬೇಕಾಗುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ

ಅಸ್ಮಿತೆಗೆ ಸಂಬಂಧಪಟ್ಟ ಮಾಹಿತಿಯನ್ನು ಸಂಗ್ರಹಿಸುತ್ತಿದ್ದೇವೆಂಬ ಅತಾರ್ಕಿಕ ಮತ್ತು ವಿಪರೀತ ಭಯವನ್ನು ಮೂಡಿಸುವ ಸಾಮಾಜಿಕ ಅಂಕಿಅಂಶಗಳನ್ನು ಕಲೆಹಾಕುವಾಗ ನಾವು ಹೆಚ್ಚು ಕ್ರಿಯಾಶೀಲರಾಗಿರುವ ಧೋರಣೆಯನ್ನು ಹೊಂದಿರಬೇಕಾಗುತ್ತದೆ.

ಕೋಷ್ಟಕ ೧ ಗ್ರಾಮೀಣ ಹಾಗೂ ನಗರ ಭಾರತದಲ್ಲಿರುವ ವಿವಿಧ ಜಾತಿಗಳು ಮತ್ತು ಸಮುದಾಯಗಳ ಒಟ್ಟು ಜನಸಂಖ್ಯೆಯ ಇಪ್ಪತ್ತು ವರ್ಷಗಳು ಮತ್ತು ಅದಕ್ಕೂ ಮೇಲ್ಪಟ್ಟ ವಯಸ್ಸಿನ ಪದವೀಧರರ ಶೇಕಡಾವಾರು ಪ್ರಮಾಣವನ್ನು ತೋರಿಸುತ್ತದೆ. ಗ್ರಾಮೀಣ ಭಾರತದಲ್ಲಿ ಕೇವಲ ಶೇಕಡಾ ೧ಕ್ಕಿಂತ ಸ್ವಲ್ಪ ಹೆಚ್ಚು ಪ್ರಮಾಣದ ಪದವೀಧರರು ಪ.ಜಾ. ಪ.ಪಂ. ಮತ್ತು ಮುಸ್ಲಿಂ ಸಮುದಾಯಗಳಲ್ಲಿದ್ದರೆ, ಹಿಂದೂ ಮೇಲ್ಜಾತಿಗಳಲ್ಲಿ ಅವರ ಪ್ರಮಾಣ ಅದಕ್ಕಿಂತ ನಾಲ್ಕರಿಂದ ಐದು ಪಟ್ಟು ಹೆಚ್ಚು. ನಗರ ಭಾರತದಲ್ಲಿ ಅಸಮಾನತೆಯು ಕಂಡುಬರುತ್ತಿದ್ದು, ವಿಶೇಷವಾಗಿ

**ಕೋಷ್ಟಕ ೧: ಉನ್ನತ ಶಿಕ್ಷಣದಲ್ಲಿ ಅಸಮಾನತೆ**
**೧೯೯೯-೨೦೦೦**

| ಜಾತಿಗಳು/ಸಮುದಾಯಗಳು | ಗ್ರಾಮೀಣ ಭಾರತ | ನಗರ ಭಾರತ |
|---|---|---|
| ಪ.ಪಂ. | ೧.೧ | ೧೦.೯ |
| ಪ.ಜಾ. | ೧,೨ | ೪.೭ |
| ಮುಸ್ಲಿಂ | ೧.೩ | ೬.೧ |
| ಹಿಂದೂ-ಇ.ಹಿಂ.ಜಾ | ೨.೧ | ೮.೬ |
| ಸಿಖ್ | ೨.೮ | ೨೫.೦ |
| ಕ್ರಿಶ್ಚಿಯನ್ | ೪.೭ | ೨೩.೭ |
| ಹಿಂದೂ – ಮೇಲ್ಜಾತಿ | ೫.೩ | ೨೫.೩ |
| ಇತರ ಮತಧರ್ಮಗಳು | ೫.೪ | ೩೧.೫ |
| ಭಾರತದೆಲ್ಲೆಡೆ ಸರಾಸರಿ | ೨.೬ | ೧೫.೫ |

ಮೇಲಿನ ಸಾಲುಗಳು ಒಟ್ಟು ಜನಸಂಖ್ಯೆಯ ೨೦ ವರ್ಷ ಮತ್ತು ಅದಕ್ಕೂ ಮೇಲಿನ ಶೇಕಡಾವಾರು ಪದವೀಧರರನ್ನು ತೋರಿಸುತ್ತದೆ.
ಮೂಲ: ರಾಷ್ಟ್ರೀಯ ಮಾದರಿ ಸಮೀಕ್ಷಾ ಕಛೇರಿ ೫೫ನೆ ಸುತ್ತಿನ ಸಮೀಕ್ಷೆ, ೧೯೯೯-೨೦೦೦.

**ಕೋಷ್ಟಕ ೨: ಹೆಚ್ಚು ಮತ್ತು ಕಡಿಮೆ ಪ್ರಾತಿನಿಧ್ಯ ಹೊಂದಿರುವ ಗುಂಪುಗಳು ೧೯೯೯-೨೦೦೦**

| ಜಾತಿಗಳು/ಸಮುದಾಯ ಗುಂಪುಗಳು | ಗ್ರಾಮೀಣ ಭಾರತ | ನಗರ ಭಾರತ |
|---|---|---|
| ಪ.ಪಂ. | ೪೩ | ೭೧ |
| ಪ.ಜಾ. | ೪೭ | ೩೦ |
| ಮುಸ್ಲಿಂ | ೫೨ | ೩೯ |
| ಹಿಂದೂ-ಇ.ಹಿಂ.ಜಾ | ೮೨ | ೫೬ |
| ಸಿಖ್ | ೧೦೭ | ೧೬೪ |
| ಕ್ರಿಶ್ಚಿಯನ್ | ೨೦೦ | ೧೫೪ |
| ಹಿಂದೂ – ಮೇಲ್ಜಾತಿ | ೨೦೫ | ೧೬೪ |
| ಇತರ ಮತಧರ್ಮಗಳು | ೨೦೦ | ೨೦೦ |

ಮೇಲಿನ ಸಾಲುಗಳು ಒಟ್ಟು ಜನಸಂಖ್ಯೆಯಲ್ಲಿರುವ ೨೦ ವರ್ಷಕ್ಕಿಂತಲೂ ಹೆಚ್ಚು ವಯೋಮಾನದವರ ಗುಂಪುಗಳ ಶೇಕಡಾವಾರು ಪಾಲನ್ನು ತೋರಿಸುತ್ತದೆ.

100ಕ್ಕಿಂತಲೂ ಕಡಿಮೆಯಿರುವ ಸಂಖ್ಯೆಗಳು ಕಡಿಮೆ ಪ್ರಾತಿನಿಧ್ಯವನ್ನು, 100ಕ್ಕಿಂತಲೂ ಹೆಚ್ಚಿನ ಸಂಖ್ಯೆಗಳು ಹೆಚ್ಚಿನ ಪ್ರಾತಿನಿಧ್ಯವನ್ನು ಸೂಚಿಸುತ್ತವೆ.
ಮೂಲ: ರಾಷ್ಟ್ರೀಯ ಮಾದರಿ ಸಮೀಕ್ಷಾ ಕಛೇರಿ ೫೫ನೆ ಸುತ್ತಿನ ಸಮೀಕ್ಷೆ, ೧೯೯೯-೨೦೦೦.

ಪ.ಜಾ.ಗಳು, ಹಾಗೂ ಮುಸ್ಲಿಮರು, ಇ.ಹಿಂ.ಜಾ.ಗಳು ಮತ್ತು ಪ.ಪಂ.ದವರು ಮುಂದುವರಿದ ಸಮುದಾಯಗಳು ಮತ್ತು ಜಾತಿಗಳಿಗಿಂತ ಹಿಂದುಳಿದಿದ್ದು, ಅವರ ಜನಸಂಖ್ಯೆಯಲ್ಲಿ ಕಾಲು ಭಾಗದಷ್ಟು ಅಥವಾ ಅದಕ್ಕಿಂತಲೂ ಹೆಚ್ಚಿನ ಪದವೀಧರರಿದ್ದಾರೆ. ಗ್ರಾಮೀಣ ಹಾಗೂ ನಗರ ಭಾರತಗಳೆರಡೂ ಕಡೆಯಲ್ಲೂ ಪ.ಪಂ.ಗಳು, ಪ.ಜಾ.ಗಳು, ಮುಸ್ಲಿಮರು ಮತ್ತು ಇ.ಹಿಂಜಾ.ಗಳು ಸದಾ ರಾಷ್ಟ್ರೀಯ ಸರಾಸರಿಗಿಂತ ಕೆಳಗಿದ್ದರೆ ಇತರ ಸಮುದಾಯಗಳು ವಿಶೇಷವಾಗಿ ಹಿಂದೂ ಮೇಲ್ಜಾತಿಯವರು ರಾಷ್ಟ್ರೀಯ ಸರಾಸರಿಗಿಂತ ಬಹಳ ಮೇಲಿದ್ದಾರೆ ಎಂದು ನೋಡುವುದು ಮತ್ತೊಂದು ವಿಧಾನವಾಗಿದೆ.

ಕೋಷ್ಟಕ ೨, ರಾಷ್ಟ್ರಮಟ್ಟದ ಪದವೀಧರರ ಗುಂಪಿನ ಒಟ್ಟು ಸಂಖ್ಯೆಗೆ ಹೋಲಿಸಿದರೆ ೨೦ ವರ್ಷಗಳು ಮತ್ತು ಅದಕ್ಕೂ ಹೆಚ್ಚು ವಯೋಮಾನದವರ ಒಟ್ಟು ಜನಸಂಖ್ಯೆಯಲ್ಲಿ ವಿವಿಧ ಜಾತಿಗಳು ಮತ್ತು ಸಮುದಾಯಗಳಲ್ಲಿರುವ ಪದವೀಧರರ ಪ್ರಮಾಣವನ್ನು ತೋರಿಸುತ್ತದೆ. ಮತ್ತೊಂದು ವಿಧದಲ್ಲಿ ಹೇಳುವುದಾದರೆ ಯಾವ ಗುಂಪುಗಳಿಗೆ ಪದವೀಧರರ ಪ್ರಮಾಣಾನುಗುಣ ಪಾಲು ಹೆಚ್ಚಿದೆ (ಅಥವಾ ಕಡಿಮೆ ಇದೆ) ಎನ್ನುವುದನ್ನು ಕೋಷ್ಟಕವು ತೋರಿಸುತ್ತದೆ. ಮತ್ತೊಮ್ಮೆ ಗ್ರಾಮೀಣ ಹಿಂದೂ ಇ.ಹಿಂ.ಜಾ.ಗಳು ಮತ್ತು ನಗರ ಪ.ಪಂ.ಗಳನ್ನು (ಕಡಿಮೆ ಪ್ರಾತಿನಿಧ್ಯವಿದ್ದರೂ ಅಷ್ಟೇನೂ ತೀವ್ರವಾಗಿರದ) ಹೊರತುಪಡಿಸಿದರೆ, ಅದೇ ಗುಂಪುಗಳ ಪ್ರಾತಿನಿಧ್ಯವು ಅತ್ಯಂತ ಕಡಿಮೆಯಾಗಿದೆ, ಆದರೆ ಹಿಂದೂ ಮೇಲ್ಜಾತಿಗಳು, ಇತರ ಮತಧರ್ಮಗಳು (ಜೈನರು, ಪಾರ್ಸಿಗಳು, ಬೌದ್ಧರು, ಇತ್ಯಾದಿ) ಮತ್ತು ಕ್ರಿಶ್ಚಿಯನ್ನರ ಪ್ರಾತಿನಿಧ್ಯವು ಗಣನೀಯವಾಗಿ ಮೇಲ್ಮಟ್ಟದಲ್ಲಿದೆ. ಹಾಗಾಗಿ, ಹಿಂದೂ ಮೇಲ್ಜಾತಿಗಳ ಪದವೀಧರರ ಪಾಲು ಗ್ರಾಮೀಣ ಮತ್ತು ನಗರ ಭಾರತಗಳಲ್ಲಿ ೨೦ ವರ್ಷಕ್ಕೂ ಮಿಕ್ಕಿದ ವಯೋಮಾನದ ಜನಸಂಖ್ಯೆಯಲ್ಲಿ ಕ್ರಮವಾಗಿ ಎರಡರಷ್ಟು ಮತ್ತು ಒಂದೂವರೆಯಷ್ಟಿದೆ. ಉದಾಹರಣೆಗೆ, ೨೦ಕ್ಕೂ ಮಿಕ್ಕಿದ ವಯೋಮಾನದವರ ಜನಸಂಖ್ಯೆಯಲ್ಲಿ ಅನುಕ್ರಮವಾಗಿ ಕೇವಲ ಶೇಕಡಾ ೩೦ ಹಾಗೂ ೪೯ರಷ್ಟಿರುವ ನಗರದ ಪ.ಜಾ.ಗಳು ಮತ್ತು ಮುಸ್ಲಿಮರೊಂದಿಗೆ ಇದನ್ನು ಹೋಲಿಸಿ ನೋಡಿ. ಈ ದತ್ತಾಂಶವು ರಾಷ್ಟ್ರಾದ್ಯಂತವಿರುವ ಎಲ್ಲ ವಿಧದ ಸಂಸ್ಥೆಗಳ ಎಲ್ಲ ಪದವೀಧರರಿಗೂ ಅನ್ವಯಿಸುತ್ತದೆ ಎನ್ನುವುದನ್ನು ನಾವಿಲ್ಲಿ ಒತ್ತಿ ಹೇಳಬೇಕಾಗಿದೆ. ಗಣ್ಯ ವೃತ್ತಿಪರ ಸಂಸ್ಥೆಗಳತ್ತ ನಾವು ನೋಡಿದರೆ, ಮೇಲ್ಜಾತಿಗಳ ಮತ್ತು ಮುಂದುವರೆದ ಸಮುದಾಯಗಳ ಪ್ರಾಧಾನ್ಯತೆಯು ಇನ್ನೂ ಹೆಚ್ಚಿರುವ ಸಾಧ್ಯತೆ ಇದೆ. ಇಂತಹ ಪ್ರತಿಪಾದನೆಯು ನಿಜವೊ ಅಲ್ಲವೊ ಎಂದು ತೋರಿಸಲು ಸಂಬಂಧಿಸಿದ ದತ್ತಾಂಶಗಳನ್ನು ಸಂಗ್ರಹಿಸಲು ಮೇಲ್ಜಾತಿಗಳು ಮತ್ತು ಮುಂದುವರೆದ ಸಮುದಾಯಗಳು ನಿರಾಕರಿಸಿದರೂ ಕೂಡ, ಈ ಸಾಧ್ಯತೆಯನ್ನು ನಾವು ಕಾಣಬಹುದಾಗಿದೆ.

ಮೇಲಿನ ಕೋಷ್ಟಕಗಳು ಸಕಾರಾತ್ಮಕ ಕ್ರಿಯೆಯನ್ನು ರೂಪಿಸಲು ನೆರವಾಗುವ ಅತ್ಯಂತ ಸರಳ ಹಾಗೂ ಅತ್ಯಂತ ನೇರವಾದ ಮಾಹಿತಿಯನ್ನು ತೋರಿಸುತ್ತಿವೆ. ರಾಷ್ಟ್ರೀಯ ಸರಾಸರಿಗಿಂತ ತುಲನಾತ್ಮಕವಾಗಿ ಕಡಿಮೆ ಪ್ರಾತಿನಿಧ್ಯವಿರುವ ಅಥವಾ ಸಾಕಷ್ಟು ಕಡಿಮೆ ಪ್ರಮಾಣದ ಪದವೀಧರರಿರುವುದು ಇತರ ವಿಧಗಳ ನಿರ್ದಿಷ್ಟ ಜಾತಿಗಳು, ಸಮುದಾಯಗಳು ಅಥವಾ ಗುಂಪುಗಳನ್ನು ಸಕಾರಾತ್ಮಕ ಕ್ರಿಯೆಗೆ ಗುರಿಯಾಗಿಸಿಕೊಳ್ಳಲು ನ್ಯಾಯಸಮ್ಮತವಾದ ಮತ್ತು ಪಾರದರ್ಶಕವಾದ ನೆಲೆಯನ್ನು ಒದಗಿಸುತ್ತದೆ. ಅಂತಹ ದತ್ತಾಂಶಗಳಿಂದ ಸಾಪೇಕ್ಷ ಅನನುಕೂಲತೆಗಳ ಪ್ರಮಾಣವನ್ನೂ ಕೂಡ ಅಂದಾಜು ಮಾಡಬಹುದು ಮತ್ತು ನೀತಿಯನ್ನು ಸರಿಪಡಿಸಲು ಅದನ್ನು ಬಳಸಬಹುದು.

**ಕೋಷ್ಟಕ ೩: ಜಾತಿ/ಸಮುದಾಯಗಳು, ವರ್ಗ ಮತ್ತು ಲಿಂಗವನ್ನು ಆಧರಿಸಿದ ಶೇಕಡಾವಾರು ಸ್ನಾತಕೋತ್ತರ ಪದವೀಧರರು ಹಾಗೂ ವೃತ್ತಿಪರ ಪದವೀಧರರ ಸಂಖ್ಯೆ: ರಾಷ್ಟ್ರೀಯ ಚುನಾವಣಾ ಅಧ್ಯಯನದಿಂದ ಪಡೆದುಕೊಂಡ ದತ್ತಾಂಶ ೨೦೦೪**

| | | ಎಲ್ಲ ವರ್ಗಗಳು | ಶ್ರೀಮಂತರು | ಮದ್ಯಮ | ಕೆಳ ಮದ್ಯಮ | ಬಡವರು | ಅತ್ಯಂತ ಬಡವರು | ಒಟ್ಟು |
|---|---|---|---|---|---|---|---|---|
| ಎಲ್ಲ ಜಾತಿ | ಎಲ್ಲರು | ೨.೫ | ೮.೧ | ೬.೮ | ೧.೬ | ೦.೮ | ೦.೬ | ೨೬೮೨೯ |
| ಸಮುದಾಯಗಳು | ಪುರುಷರು | ೩.೪ | ೯.೮ | ೯.೧ | ೨.೨ | ೧.೨ | ೧.೦ | ೧೪೩೪೫ |
| | ಮಹಿಳೆಯರು | ೧.೪ | ೫.೮ | ೩.೯ | ೦.೮ | ೦.೪ | ೦.೧ | ೧೨೪೮೪ |
| ಹಿಂದೂ ದ್ವಿಜ | ಎಲ್ಲರು | ೫.೬ | ೧೩.೬ | ೮.೮ | ೨.೭ | ೧.೭ | ೦.೫ | ೪೧೪೮ |
| ಮೇಲ್ಜಾತಿ | ಪುರುಷರು | ೭.೪ | ೧೭.೮ | ೧೦.೩ | ೩.೯ | ೨.೭ | ೧.೦ | ೨೨೩೦ |
| | ಮಹಿಳೆಯರು | ೩.೫ | ೮.೩ | ೭.೩ | ೧.೪ | ೦.೩ | ೦.೦ | ೧೯೧೮ |
| ಹಿಂದೂ ಮತ್ತು ಸಿಖ್ | ಎಲ್ಲರು | ೨.೮ | ೬.೨ | ೪.೬ | ೦.೭ | ೧.೨ | ೦.೮ | ೨೫೨೧ |
| ಮಾದ್ಯಮಿಕ | ಪುರುಷರು | ೩.೫ | ೭.೩ | ೫.೮ | ೧.೨ | ೦.೯ | ೧.೭ | ೧೩೬೧ |
| ಜಾತಿಗಳು (ದ್ವಿಜರಲ್ಲದ, ಮತ್ತು ಇ.ಹಿಂ.ಜಾಗಳಲ್ಲದ) | ಮಹಿಳೆಯರು | ೨.೦ | ೪.೮ | ೩.೪ | ೦.೦ | ೨.೨ | ೦.೦ | ೧೧೬೦ |
| ಇ.ಹಿಂ.ಜಾ | ಎಲ್ಲರು | ೧.೮ | ೫.೮ | ೬.೬ | ೧.೧ | ೦.೭ | ೦.೭ | ೯೫೦೫ |
| (ಹಿಂದೂ ಮತ್ತು ಸಿಖ್) | ಪುರುಷರು | ೨.೭ | ೬.೨ | ೧೦.೧ | ೧.೬ | ೧.೩ | ೧.೩ | ೫೦೨೦ |
| | ಮಹಿಳೆಯರು | ೦.೮ | ೫.೨ | ೧.೯ | ೦.೪ | ೦.೧ | ೦.೧ | ೪೪೮೫ |
| ಪ.ಜಾ. (ಯಾವುದೇ ಧರ್ಮ) | ಎಲ್ಲರು | ೧.೪ | ೪.೨ | ೮.೦ | ೧.೬ | ೦.೫ | ೦.೪ | ೪೨೭೮ |
| | ಪುರುಷರು | ೨.೧ | ೨.೩ | ೧೧.೭ | ೨.೮ | ೦.೭ | ೦.೮ | ೨೨೮೭ |
| | ಮಹಿಳೆಯರು | ೦.೬ | ೫.೦ | ೨.೬ | ೦.೨ | ೦.೨ | ೦.೧ | ೧೯೯೧ |
| ಪ.ಪಂ. (ಯಾವುದೇ | ಎಲ್ಲರು | ೦.೯ | ೧.೯ | ೬.೧ | ೧.೪ | ೦.೬ | ೦.೪ | ೨೧೮೧ |
| ಧರ್ಮ) | ಪುರುಷರು | ೧.೩ | ೩.೩ | ೧೦.೦ | ೧.೬ | ೦.೩ | ೦.೭ | ೧೧೮೫ |
| | ಮಹಿಳೆಯರು | ೦.೫ | ೦.೦ | ೧.೮ | ೧.೧ | ೦.೫ | ೦.೨ | ೯೯೬ |
| ಮುಸ್ಲಿಮರು | ಎಲ್ಲರು | ೧.೮ | ೭.೧ | ೪.೦ | ೧.೫ | ೦.೩ | ೦.೦ | ೨೯೬೩ |
| | ಪುರುಷರು | ೨.೫ | ೧೦.೧ | ೬.೦ | ೧.೨ | ೦.೫ | ೦.೦ | ೧೬೩೮ |
| | ಮಹಿಳೆಯರು | ೦.೯ | ೧.೭ | ೧.೬ | ೨.೦ | ೦.೦ | ೦.೦ | ೧೩೨೭ |
| ಕ್ರಿಶ್ಚಿಯನ್ನರು | ಎಲ್ಲರು | ೩.೩ | ೧೩.೨ | ೭.೮ | ೧.೮ | ೦.೮ | ೦.೦ | ೬೩೦ |
| | ಪುರುಷರು | ೩.೦ | (೧೧.೧) | ೫.೭ | ೩.೩ | ೧.೫ | ೦.೦ | ೩೦೨ |
| | ಮಹಿಳೆಯರು | ೩.೭ | ೧೫.೦ | ೯.೫ | ೦.೦ | ೦.೦ | ೦,೦ | ೩೨೮ |

ಟಿಪ್ಪಣಿ: ಈ ಎಲ್ಲ ಅಂಕಿಅಂಶಗಳು ವಿವಿಧ ವರ್ಗಗಳಿಗೆ ಸೇರಿದ ಪ್ರತಿವರ್ತಿಗಳು ಅವರ ಸ್ನಾತಕೋತ್ತರ ಮತ್ತು ವೃತ್ತಿಪರ ಪದವಿಯನ್ನು ಪಡೆದಿರುವ ಬಗ್ಗೆ ನೀಡಿದ ವರದಿಯನುಸಾರ ತೆಗೆದುಕೊಂಡ ಶೇಕಡವಾರು. ೫೦ಕ್ಕಿಂತ ಕಡಿಮೆ ಪ್ರತಿವರ್ತಿಗಳಿಗೆ ಸಂಬಂಧಿಸಿದ ಅಂಕಿಅಂಶಗಳನ್ನು ಆವರಣ ಚಿಹ್ನೆಯಲ್ಲಿಡಲಾಗಿದೆ. ಆದಾಯವನ್ನು ಕುರಿತು ಸ್ವ-ವರದಿ ಆಧಾರಿತ ದತ್ತಾಂಶಗಳು ಮತ್ತು ಆಸ್ತಿಯನ್ನು ಹೊಂದಿರುವ ಬಗ್ಗೆ ಗಮನಿಸಲಾದ ದತ್ತಾಂಶಗಳ ಸಂಯೋಜನವನ್ನು ಆಧರಿಸಿ ವರ್ಗಗಳನ್ನು ವರ್ಗೀಕರಿಸಲಾಗಿದೆ.

ಮೂಲ: ರಾಷ್ಟ್ರೀಯ ಚುನಾಣಾ ಅಧ್ಯಯನ ೨೦೦೪, ಸಿ.ಎಸ್.ಡಿ.ಎಸ್. ದತ್ತಾಂಶ ಘಟಕ. ರಾಜ್ಯದ ಜನಸಂಖ್ಯೆಯಿಂದ ದತ್ತಾಂಶವನ್ನು ಅಳೆಯಲಾಗಿದೆ.

ಕೋಷ್ಟಕ ೩, ಅನನುಕೂಲತೆಗಳ ವಿವಿಧ ಮೂಲಗಳ, ಇಲ್ಲಿನ ಸಂದರ್ಭದಲ್ಲಿ ಜಾತಿ ಮತ್ತು ಸಮುದಾಯ, ಲಿಂಗ ಮತ್ತು ವರ್ಗಗಳ ನಡುವಿನ ಪರಸ್ಪರ ಸಂಪರ್ಕದ ಪರಿಣಾಮಗಳನ್ನು ತೋರಿಸುತ್ತಿದೆ. ಇದನ್ನು ೨೦೦೪ರಲ್ಲಿ ಸಿ.ಎಸ್.ಡಿ.ಎಸ್ ಮಾಡಿದ ರಾಷ್ಟ್ರೀಯ ಚುನಾವಣಾ ಅಧ್ಯಯನದಿಂದ ತೆಗೆದುಕೊಳ್ಳಲಾಗಿದೆ. ಇದು ವಿವಿಧ ಆರ್ಥಿಕ ಶ್ರೇಣಿಗಳಿಗೆ ಸೇರಿದ ವಿವಿಧ ಜಾತಿ-ಸಮುದಾಯಗಳ ಪುರುಷ ಮತ್ತು ಮಹಿಳಾ ಸ್ನಾತಕೋತ್ತರ ಮತ್ತು ವೃತ್ತಿಪರ ಪದವೀಧರರ ಶೇಕಡಾವಾರು ಸಂಖ್ಯೆಯನ್ನು ತೋರಿಸುತ್ತದೆ. “ಎಲ್ಲ ಜಾತಿ ಸಮುದಾಯಗಳ” ಮೊದಲನೆ ಮೂರು ಸಾಲುಗಳು ನಮಗೆ ಲಿಂಗ ಮತ್ತು ವರ್ಗಗಳ ಕಾರ್ಯಾಚರಣೆಗಳನ್ನು ತೋರಿಸುತ್ತವೆ. ಎಲ್ಲ ಸಮುದಾಯಗಳ ಮತ್ತು ವರ್ಗಗಳಿಗೆ ಸೇರಿದ ಪುರುಷ ಮತ್ತು ಮಹಿಳೆಯರ ಅಂಕಿ ಸಂಖ್ಯೆಗಳು ಶಿಕ್ಷಣವನ್ನು ಪಡೆಯುವಲ್ಲಿ ವ್ಯಾಪಕವಾದ ಲಿಂಗಾಧಾರಿತ ತಾರತಮ್ಯವನ್ನು ಸುಸ್ಪಷ್ಟವಾಗಿ ತೋರಿಸುತ್ತದವೆ. ಉನ್ನತ ಶಿಕ್ಷಣವನ್ನು ಪಡೆದವರಲ್ಲಿ ಕೇವಲ ೧.೪ ಇರುವ ಮಹಿಳೆಯರಿಗೆ ಹೋಲಿಸಿದರೆ ಪುರುಷರ ಶೇಕಡಾವಾರು ಸಂಖ್ಯೆ ೩.೪ರಷ್ಟಿದೆ. ಆರ್ಥಿಕ ಅಸಮಾನತೆಗೆ ಸಂಬಂಧಿಸಿದಂತೆಯೂ ಕೂಡ ಎಲ್ಲ ಸಮುದಾಯಗಳ ವಿವಿಧ ವರ್ಗಗಳ ಅಂಕಿ ಸಂಖ್ಯೆಗಳು ಆರ್ಥಿಕ ಅಸಮಾನತೆಗಳ ಕಾರ್ಯದ ಬಗ್ಗೆ ಇದೇ ಅಂಶವನ್ನು ತಿಳಿಯಪಡಿಸುತ್ತವೆ: ಆರ್ಥಿಕ ಶ್ರೇಣಿಯಲ್ಲಿ ನಾವು ಕೆಳಮುಖವಾಗಿ ಹೋದಂತೆಲ್ಲಾ ಉನ್ನತ ಶಿಕ್ಷಣ ಪಡೆದವರ ಸಂಖ್ಯೆ, ಅದರಲ್ಲೂ ವಿಶೇಷವಾಗಿ ಅತ್ಯಂತ ಕೆಳಗಿನ ಮೂರು ಶ್ರೇಣಿಗಳ ಸಂಖ್ಯೆ, ತೀವ್ರಗತಿಯಲ್ಲಿ ಇಳಿಮುಖವಾಗುತ್ತಾ ಹೋಗುತ್ತದೆ.

ಪುರುಷ ಮತ್ತು ಮಹಿಳೆಯರಿಬ್ಬರಿಗೆ ಸಂಬಂಧಿಸಿದಂತೆಯೂ ಇದು ಸತ್ಯ.

"ಎಲ್ಲ ವರ್ಗಗಳು" ಎಂದು ತೋರಿಸಿರುವ ಮೊದಲನೆ ಕಲಮನ್ನು ನೋಡಿದಾಗ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಿಂದೂ ಜಾತಿ ವ್ಯವಸ್ಥೆಯ ಶ್ರೇಣೀಕರಣ ಈಗಲೂ ಮಹತ್ವದ್ದಾಗಿದೆ ಎನ್ನುವುದು ಕಾಣಿಸುತ್ತದೆ. ಉನ್ನತ ಶಿಕ್ಷಣವನ್ನು ಸಾಧಿಸುವಲ್ಲಿ ಇತರ ಎಲ್ಲ ಸಾಮಾಜಿಕ ಗುಂಪುಗಳಿಗಿಂತ ಮುಂದುರಿದವರೆಂದರೆ ಶೇಕಾಡಾ ೫.ಲರಷ್ಟಿರುವ ಹಿಂದೂ ದ್ವಿಜರು (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಮತ್ತು ಕಾಯಸ್ಥರನ್ನೂ ಒಳಗೊಂಡಂತೆ ಅದಕ್ಕೆ ಸಮನಾದ ಜಾತಿಗಳಾದ ಉತ್ತರ ಇಂಡಿಯಾದ ಭೂಮಿಹಾರರು ಮತ್ತು ಪಶ್ಚಿಮ ಭಾರತದ ತ್ಯಾಗಿ, ಬಂಗಾಳದ ಬೊದ್ದಿಗಳು ಮತ್ತು ವಾಯುವ್ಯ ಭಾರತದ ಕತ್ರಿಗಳು). ಶ್ರೇಣೀಕರಣದ ಕೆಳಗೆ ಹೋದಂತೆಲ್ಲಾ ಮಾಧ್ಯಮಿಕ ಜಾತಿಗಳಲ್ಲಿನ (ದಿಜರಲ್ಲದ, ಹಿಂದುಳಿದ ವರ್ಗದವರಲ್ಲದ ಜಾಟ್, ಸಿಖ್, ಮರಾಠ, ರೆಡ್ಡಿ, ನಾಯರ್, ಪಾಟಿದಾರ್ ಇತ್ಯಾದಿ ಜಾತಿಗಳು) ಪ್ರಮಾಣವು ೨,ಲಕ್ಕೆ, ಇತರ ಎಲ್ಲ ಹಿಂದುಳಿದ ವರ್ಗಗಳ ಜಾತಿಗಳಲ್ಲಿ (ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರನ್ನು ಹೊರತುಪಡಿಸಿ) ೧.ಲಕ್ಕೆ ಮತ್ತು ಪ.ಜಾ. ಮತ್ತು ಪ.ಪಂ.ಗಳಲ್ಲಿ ಅದು ಮತ್ತೂ ಕೆಳಗೆ ಇಳಿಯುತ್ತದೆ. ಅತ್ಯಂತ ಉನ್ನತ ಶಿಕ್ಷಣವನ್ನು ಪಡೆದ ಮುಸ್ಲಿಮರ ಪ್ರಮಾಣವು ಹಿಂದೂ ಮತ್ತು ಸಿಖ್ ಇ.ಹಿಂ.ಜಾ,ಗಳ ಪ್ರಮಾಣದಷ್ಟೆ ಇದೆ. ಕ್ರಿಶ್ಚಿಯನ್ನರು ಮತ್ತಷ್ಟು ಉತ್ತಮ ಸ್ಥಾನದಲ್ಲಿದ್ದು ಶಿಕ್ಷಣದ ಸಾಧನೆಯಲ್ಲಿ ಹಿಂದೂ ದ್ವಿಜರನ್ನು ಬಿಟ್ಟರೆ ಅವರೇ ಎರಡನೆಯ ಸ್ಥಾನದಲ್ಲಿದ್ದಾರೆ.

ಕೋಷ್ಟಕವು ಮೂರು ಚರಾಂಶಗಳ ನಡುವಿನ ಪರಸ್ಪರ ಕ್ರಿಯೆ ಮತ್ತು ಪ್ರತಿಕ್ರಿಯೆಗಳನ್ನು ಚಿತ್ರಿಸುತ್ತದೆ. ಪ್ರತಿಯೊಂದು ಆರ್ಥಿಕ ಶ್ರೇಣಿಯ ವ್ಯಾಪ್ತಿಯಲ್ಲಿ ಲಿಂಗವು ಪಾತ್ರವನ್ನು ವಹಿಸುತ್ತದೆ ಎನ್ನುವುದನ್ನು ಈಗಾಗಲೇ ನಾವು ನೋಡಿದ್ದೇವೆ. ನಾವು ಶ್ರೀಮಂತರಿಂದ ಕಡುಬಡವರ ಕಡೆ ಹೋದಂತೆಲ್ಲಾ ಲಿಂಗದ ಅಂತರವು ಹೆಚ್ಚುತ್ತಾ ಹೋಗುತ್ತದೆ. ಒಬ್ಬ *ಪುರುಷನಿಗೆ ಉನ್ನತ ಶೈಕ್ಷಣಿಕ ಪದವಿಯನ್ನು ಗಳಿಸುವ ಸಾಧ್ಯತೆಯು ಒಬ್ಬ ಮಹಿಳೆಗಿಂತ ಹತ್ತು ಪಟ್ಟು ಹೆಚ್ಚಿರುತ್ತದೆ, ಆದರೆ ಶ್ರೀಮಂತರಲ್ಲಿ ಪುರುಷನು ಅಂತಹ ಪದವಿಯನ್ನು ಪಡೆಯುವ ಸಾಧ್ಯತೆಯು ಮಹಿಳೆಗಿಂತ ಕೇವಲ ೧.೭ರಷ್ಟಿರುತ್ತದೆ. ಪ್ರತಿಯೊಂದು ಜಾತಿ ಸಮುದಾಯದಲ್ಲಿ ಲಿಂಗವು ಸಹ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಪುರುಷರಿಗಿಂತ ಮಹಿಳೆಯರೇ ಸ್ವಲ್ಪ ಮಟ್ಟಿಗೆ ಉತ್ತಮ ಸಾಧನೆ ಮಾಡಿರುವ ಕ್ರಿಶ್ಚಿಯನ್ ಸಮುದಾಯ ಮಾತ್ರ ಇದಕ್ಕೆ ಅಪವಾದವಾಗಿದೆ. ಇಲ್ಲಿಯೂ ಮತ್ತೆ ಸಾಮಾಜಿಕ ಶ್ರೇಣೀಕರಣದ ಕೆಳ ಹಂತದಲ್ಲಿ ಲಿಂಗದ ಅಂತರವು ಹೆಚ್ಚಿರುತ್ತದೆ: ಪ,ಜಾ,. ಪ,ಪಂ., ಇ.ಹಿಂ.ಜಾ. ಮತ್ತು ಮಸ್ಲಿಮರಲ್ಲಿ ಮಹಿಳೆಯರು, ಮೇಲ್ಜಾತಿಯವರಿಗೆ ಹೋಲಿಸಿದರೆ, ಅವರ ಸಮುದಾಯದಲ್ಲಿನ ಪುರುಷರಿಗಿಂತ ಹೆಚ್ಚು ಅನನುಕೂಲತೆಗೆ ಒಳಗಾಗಿದ್ದಾರೆ.

ಜಾತಿ-ಸಮುದಾಯ ಮತ್ತು ವರ್ಗಗಳ ನಡುವಿನ ಪರಸ್ಪರ ಕ್ರಿಯೆಯ ಮತ್ತು ಪ್ರತಿಕ್ರಿಯೆಗಳ ಅಂಶಗಳು ಮೇಲ್ತುದಿಯಲ್ಲಿ ಶೈಕ್ಷಣಿಕ ಅವಕಾಶಗಳಲ್ಲಿ ಉಂಟುಮಾಡುವ ವ್ಯತ್ಯಾಸದ ಉಪಯುಕ್ತ ಚಿತ್ರಣವನ್ನು ಕೋಷ್ಟಕ ೩ರಲ್ಲಿ ನೀಡಲಾಗಿದೆ. ಪ್ರತಿಯೊಂದು ಜಾತಿ-ಸಮುದಾಯದಲ್ಲಿ ವರ್ಗವು ಬಹಳ ಮುಖ್ಯವಾಗುತ್ತದೆ ಎನ್ನುವುದನ್ನು ಇದು ತೋರಿಸುತ್ತದೆ. ಜಾತಿ ಆಧಾರಿತ ಮೀಸಲಾತಿಯನ್ನು ಪ್ರತಿಪಾದಿಸುವವರು ಈ ಅಂಶದೆಡೆಗೆ ಸಾಕಷ್ಟು ಗಮನವನ್ನು ಹರಿಸಿಲ್ಲ. ಒಟ್ಟಾರೆಯಾಗಿ ಪ್ರತಿಯೊಂದು ಜಾತಿ-ಸಮುದಾಯದಲ್ಲೂ ಆರ್ಥಿಕ ಶ್ರೇಣಿಯ ಕೆಳ ಹಂತಕ್ಕೆ ಹೋದಂತೆಲ್ಲ ಶೈಕ್ಷಣಿಕ ಸಾಧನೆಯು ಇಳಿಮುಖವಾಗುತ್ತಾ ಹೋಗುತ್ತದೆ. ಇದಕ್ಕೆ ಒಂದು ಅಪವಾದವೆಂದರೆ ಇ.ಹಿಂ.ಜಾ., ಪ.ಜಾ. ಮತ್ತು ಪ.ಪಂ.ಗಳಲ್ಲಿ ಶಿಕ್ಷಣಕ್ಕೆ ಸಂಬಂಧಿಸಿಂತೆ ಶ್ರೀಮಂತರು ಮಧ್ಯಮ ವರ್ಗದವರಿಗಿಂತ ಸ್ವಲ್ಪಮಟ್ಟಿಗೆ ಕಳಪೆ ಸಾಧನೆಯನ್ನು ಹೊಂದಿರುವುದು. ಈ ಹಂತದಲ್ಲಿ ಆರ್ಥಿಕ ಸಂಪನ್ಮೂಲಗಳಿಗೂ ಮತ್ತು ಶೈಕ್ಷಣಿಕ ಸಾಧನೆಗಳಿಗೂ ನಡುವೆ ಸಂಬಂಧವಿಲ್ಲದಿರುವ ಸಾಧ್ಯತೆಯನ್ನು ಇದು ತೋರಿಸುತ್ತದೆ. ಮಧ್ಯಮ ವರ್ಗಕ್ಕಿಂತ ಕೆಳಗೆ ಹೋದಾಗ ಇತರ ಜಾತಿ-ಸಮುದಾಯಗಳ ಮಾದರಿಯನ್ನೇ ನಾವು ಕಾಣಬಹುದು. ಪ್ರತಿಯೊಂದು ಜಾತಿ-ಸಮುದಾಯಗಳಲ್ಲಿ ಕೆಳ ಮಧ್ಯಮ ಹಂತದ ಅಥವಾ ಬಡವರ ಅಥವಾ ಕಡುಬಡವರ ಗುಂಪಿಗೆ ಸೇರಿದ ಜನರಿಗೆ ಉನ್ನತ ಶಿಕ್ಷಣದ ಎಟಕುವಿಕೆಯ ಸಾಧ್ಯತೆಯು ಅದೇ ಜಾತಿ-ಸಮುದಾಯಗಳ ಮೇಲಿನ ಎರಡು ವರ್ಗಗಳಿಗೆ ಸೇರಿದ ಜನರಿಗಿಂತ ಗಣನೀಯವಾಗಿ ಕಡಿಮೆ ಇರುತ್ತದೆ.

ಕೋಷ್ಟಕ ೩ರಲ್ಲಿ ಪ್ರತಿಯೊಂದು ವರ್ಗಗಳಲ್ಲೂ ಕೂಡ ಜಾತಿ ಮುಖ್ಯವಾಗಿರುತ್ತದೆ ಎನ್ನುವುದನ್ನೂ ಕೂಡ ತೋರಿಸಲಾಗಿದೆ. ಆರ್ಥಿಕ ಮಾನದಂಡದ ಬಗ್ಗೆ ಅತ್ಯುತ್ಸಾಹದಿಂದ ಮಾತನಾಡುವವರು ಈ ಅಂಶವನ್ನು ಪದೇ ಪದೇ ಕಡೆಗಣಿಸುತ್ತಾರೆ. ಈ ಅಂಶವು ಜಾತಿ ಮತ್ತು ವರ್ಗದ ಕೆಳಗಿನ ಹಂತಕ್ಕಿಂತ ಹೆಚ್ಚಾಗಿ ಮೇಲಿನ ಹಂತದಲ್ಲಿ ಹೆಚ್ಚು ಸಿಂಧುತ್ವವನ್ನು ಪಡೆಯುತ್ತದೆ. ಸಮಾನ ಆರ್ಥಿಕ ಶ್ರೇಣಿಯಲ್ಲಿರುವ ಹಿಂದೂ ದ್ವಿಜರು ಇತರೆ ಜಾತಿ- ಸಮುದಾಯದವರಿಗೆ

ಹೋಲಿಸಿದರೆ ಹೆಚ್ಚು ಶೈಕ್ಷಣಿಕ ಸಾಧನೆಯನ್ನು ಮಾಡುವ ಸಾಧ್ಯತೆ ಇರುತ್ತದೆ. ಅದೇ ರೀತಿ ಶ್ರೀಮಂತರಲ್ಲಿ ಜಾತಿ-ಸಮುದಾಯಗಳ ಶ್ರೇಣಿಯಲ್ಲಿ ಕೆಳಗೆ ಹೋದಂತೆಲ್ಲಾ ಶೈಕ್ಷಣಿಕ ಸಾಧನೆ ಕಳಪೆಯಾಗುತ್ತಾ ಹೋಗುತ್ತದೆ. ಕೆಳ ಹಂತದಲ್ಲಿ ಈ ಸಂಬಂಧ ಬಹಳಷ್ಟು ದುರ್ಬಲವಾಗಿದೆ. ಕೆಳ ಮಧ್ಯಮ, ಬಡವರು ಮತ್ತು ಕಡುಬಡವರಲ್ಲಿ ಇ.ಹಿಂ.ಜಾ., ಪ.ಜಾ., ಮತ್ತು ಪ.ಪಂ. ಸಮುದಾಯಗಳ ನಡುವೆ ವ್ಯವಸ್ಥಿತವಾದ ವ್ಯತ್ಯಾಸಗಳು ಕಂಡುಬರುವುದಿಲ್ಲ. ಈ ನಿಟ್ಟಿನಲ್ಲಿ, ಉನ್ನತ ಶಿಕ್ಷಣದ ಎಟುಕುವಿಕೆಯನ್ನು ನಿರ್ಬಂಧಿಸುವಲ್ಲಿ ಜಾತಿಯ ಪರಿಣಾಮಕ್ಕಿಂತ ವರ್ಗದ ಪರಿಣಾಮ ಹೆಚ್ಚಿರುವಂತೆ ಕಾಣಿಸುತ್ತದೆ.

ಪುರಾವೆ-ಆಧಾರಿತ ದೃಷ್ಟಿಕೋನ ಎಂದರೇನು ಮತ್ತು ಅದು ಹೇಗೆ ಮೊದಲಿಗೆ ಪರಸ್ಪರ ಕ್ರಿಯೆ ಪ್ರತಿಕ್ರಿಯೆಗಳನ್ನು ಮಾತ್ರವಲ್ಲದೆ ಸಾಪೇಕ್ಷ ಅನನುಕೂಲತೆಯಲ್ಲಿರುವ ತೀವ್ರತೆಯ ಶ್ರೇಣಿಯನ್ನು ಗುರುತಿಸುತ್ತದೆ ಮತ್ತು ಅದನ್ನು ಕುರಿತು ಪರ್ಯಾಲೋಚಿಸುತ್ತದೆ ಎನ್ನುವುದು ಈಗ ಸಾಕಷ್ಟು ಸ್ಪಷ್ಟವಾಗಿರಬೇಕು. ವಿಭಿನ್ನ ದತ್ತಾಂಶ ಮೂಲಗಳು ವಿಭಿನ್ನ ಅನುಕೂಲಗಳು ಮತ್ತು ನ್ಯೂನತೆಗಳನ್ನು ಹೊಂದಿರುತ್ತವೆ ಮತ್ತು ಅವುಗಳನ್ನು ಎಚ್ಚರಿಕೆಯಿಂದ ವಿಶ್ಲೇಷಣೆಗೊಳಪಡಿಸಬೇಕು ಎನ್ನುವುದರಲ್ಲಿ ಸಂಶಯವಿಲ್ಲ. (ಉದಾಹರಣೆಗೆ ಎನ್.ಎಸ್.ಎಸ್.ಒ. ಸಮೀಕ್ಷೆಯು ರಾಷ್ಟ್ರ ಮಟ್ಟದ ವ್ಯಾಪ್ತಿಯನ್ನು ಮತ್ತು ಸ್ಥಿರವಾದ ವಿಧಾನಗಳನ್ನು ಹೊಂದಿದೆ, ಆದರೆ ಒಂದು ವಿಶಾಲವಾದ ಜಾತಿಯ ಚೌಕಟ್ಟಿನಾಚೆಗೆ ಬೇಕಾದ ಮಾಹಿತಿಯನ್ನು ಕೊಡಲು ಇದಕ್ಕೆ ಸಾಧ್ಯವಿಲ್ಲ. ಎನ್.ಇ.ಎಸ್. ಸಮೀಕ್ಷೆಯು ಅಂತಹ ಮಾಹಿತಿಯನ್ನು ಕೊಡುತ್ತದೆ ಆದರೆ ಅದರ ವ್ಯಾಪ್ತಿ ಸೀಮಿತವಾಗಿದೆ.) ಈ ಉದ್ದೇಶಕ್ಕೆ ಲಭ್ಯವಿರುವ ಮಾಹಿತಿಯನ್ನು ಉಪಯೋಗಿಸುವುದು ಸಾಧ್ಯ ಮತ್ತು ಉಪಯೋಗಿಸಬೇಕು ಎಂದು ಹೇಳಬಹುದಾದರೂ ಸಕಾರಾತ್ಮಕ ಕ್ರಿಯೆಯ ದತ್ತಾಧಾರ(database)ವನ್ನು ಒದಗಿಸುವ ಉದ್ದೇಶದಿಂದಲೇ ಅದಕ್ಕೆ ಬದ್ಧವಾಗಿರುವ ಸಾಮಾಜಿಕ ಸಮೀಕ್ಷೆಗಳನ್ನು ನಿಯತಕಾಲಿಕವಾಗಿ ನಡೆಸುವುದು ಅತ್ಯಂತ ಸೂಕ್ತವಾಗಿರುತ್ತದೆ.

## ಒಂದು ಪರ್ಯಾಯ ಮಾದರಿ

ಈ ವಿಭಾಗದಲ್ಲಿ ನಾವು ಉನ್ನತ ಹಾಗೂ ವೃತ್ತಿಪರ ಶಿಕ್ಷಣ ಸಂಸ್ಥೆಗಳ ವಿಧಿಬದ್ಧ ಯೋಜನೆ ಹೇಗಿರಬೇಕು ಎನ್ನುವುದರ ಒಂದು ನೈಜ ಚಿತ್ರಣವನ್ನು ಕೊಡುತ್ತೇವೆ. ಈ ಮೇಲಿನ ಚರ್ಚೆಗನುಗುಣವಾಗಿ ನಮ್ಮ ಮಾದರಿಯು ಪುರಾವೆಯಾಧಾರಿತವಾಗಿರುತ್ತದೆ ಮತ್ತು ಈ ಹಿಂದಿನ ವಿಭಾಗಗಳಲ್ಲಿ ತೋರಿಸಿರುವ ದತ್ತಾಂಶಗಳ ವಿಧಗಳನ್ನು ಉಪಯೋಗಿಸಿ ಅದನ್ನು ರೂಪಿಸಲಾಗುತ್ತದೆ. ಇದು ಗುಂಪು ಅನನುಕೂಲತೆಗಳ ನಾಲ್ಕು ಮುಖ್ಯ ಆಯಾಮಗಳನ್ನು – ಜಾತಿ/ಸಮುದಾಯ, ಲಿಂಗ, ಪ್ರದೇಶ ಹಾಗೂ ವಸತಿಯ ವಲಯ (ಅಂದರೆ ಗ್ರಾಮೀಣ/ನಗರ ವಾಸಸ್ಥಾನ) – ಉದ್ದೇಶಿಸಿರುತ್ತದೆ. ನಗರ/ಗ್ರಾಮೀಣ ಅಭ್ಯರ್ಥಿಗಳಿಗೆ ಅವರು ಹತ್ತನೆ ತರಗತಿಯ ಪರೀಕ್ಷೆಯನ್ನು ತೆಗೆದುಕೊಂಡ ಸ್ಥಳವನ್ನು ಆಧರಿಸಿ ಪ್ರತ್ಯೇಕವಾದ ಮೌಲ್ಯಮಾಪನವಿರುತ್ತದೆ. ಜೆ.ಎನ್.ಯು ವಿಶ್ವವಿದ್ಯಾಲಯದ ಯೋಜನೆಯಲ್ಲಿ ಉಪಯೋಗಿಸಿರುವಂತಹ ಹಿಂದುಳಿದಿರುವಿಕೆಯ ಸಮಾನ ಸೂಚಕಗಳನ್ನು ಆಧರಿಸಿ ಪ್ರದೇಶಗಳನ್ನು ಮೂರು ವಲಯಗಳಾಗಿ ವಿಂಗಡಿಸಲಾಗಿದೆ. ಉನ್ನತ ಶಿಕ್ಷಣದ ಸಂದರ್ಭದಲ್ಲಿ ಸಾಪೇಕ್ಷ ಹಿಂದುಳಿದಿರುವಿಕೆಯ ಒಪ್ಪಿತ ಪ್ರಾಯೋಗಿಕ ಸೂಚಕಗಳನ್ನು ಆಧರಿಸಿ ಜಾತಿ ಮತ್ತು ಸಮುದಾಯಗಳಿಗೆ ಅನನುಕೂಲತೆಗಳ ಅಂಕಗಳನ್ನು ನೀಡಲಾಗಿದೆ. ಎಲ್ಲ ಗುಂಪು ಅನುಕೂಲತೆಗಳ ಮೌಲ್ಯಮಾಪನಗಳನ್ನು ಪ್ರಾಯೋಗಿಕ ಪುರಾವೆಗಳನ್ನು ಆಧರಿಸಿ ಮಾಡಲಾಗಿದೆಯೆ ಹೊರತು ಕೇವಲ ಗುಂಪಿನ ಸದಸ್ಯತ್ವದ ಆಧಾರದಲ್ಲಿ ಅಲ್ಲ ಎನ್ನುವುದನ್ನು ಹೇಳಬೇಕಾದ ಅಗತ್ಯವಿಲ್ಲ.

ಗುಂಪು ಅನನುಕೂಲತೆಗಳಲ್ಲದೆ ಈ ಯೋಜನೆಯು ವ್ಯಕ್ತಿಗತ ಅನನುಕೂಲತೆಗಳನ್ನೂ ಕೂಡ ಪರಿಗಣಿಸುತ್ತದೆ. ಬಹಳಷ್ಟು ಸಂಗತಿಗಳು (ಕುಟುಂಬದ ಚರಿತ್ರೆ, ವಂಶಪಾರಂಪರ್ಯವಾಗಿ ಬಂದ ಅಕ್ಷರತೆಯ ಆಳ, ಒಡಹುಟ್ಟಿದವರ ಶಿಕ್ಷಣ, ಆರ್ಥಿಕ ಸಂಪನ್ಮೂಲಗಳು ಇತ್ಯಾದಿ) ವ್ಯಕ್ತಿಗತ ಅನನುಕೂಲತೆಗಳನ್ನು ನಿರ್ಧರಿಸುತ್ತಿರುವಂತೆಯೆ, ವ್ಯಕ್ತಿಗತ ಅನನುಕೂಲತೆಗಳಿಗೆ ಎರಡು ಸತ್ವಭರಿತ ಸೂಚಕಗಳಿವೆ ಅದನ್ನು ನಾವು ಸಾರ್ವಜನಿಕ ಸಂಸ್ಥೆಗಳಿಗೆ ಪ್ರವೇಶಾತಿಯ ವ್ಯವಸ್ಥೆಯಲ್ಲಿ ಕಾರ್ಯಕಾರಿಯಾಗಿ ಉಪಯೋಗಿಸಿಕೊಳ್ಳಬಹುದು ಎಂದು ನಂಬಿದ್ದೇವೆ. ಪೋಷಕರ ಉದ್ಯೋಗ ಮತ್ತು ವ್ಯಕ್ತಿಯು ಯಾವ ರೀತಿಯ ಶಾಲೆಯಲ್ಲಿ ಪ್ರೌಢಶಾಲೆಯ ಪರೀಕ್ಷೆಯಲ್ಲಿ ಉತ್ತೀರ್ಣನಾಗಿದ್ದಾನೆ ಎನ್ನುವುದು ಆ ಎರಡು ಸೂಚಕಗಳಾಗಿವೆ. ಈ ಎರಡು ಚರಾಂಶಗಳು ಕುಟುಂಬದ ಶೈಕ್ಷಣಿಕ ಚರಿತ್ರೆ ಮತ್ತು ಆರ್ಥಿಕ ಪರಿಸ್ಥಿತಿಗಳನ್ನೊಳಗೊಂಡು ಬಹಳಷ್ಟು ವ್ಯಕ್ತಿಗತ ಅನನುಕೂಲತೆಗಳ ಪರಿಣಾಮವನ್ನು ಅರಿತುಕೊಳ್ಳುವಂತೆ ಮಾಡುತ್ತವೆ.

ಕೆಳಗಿನ ಕೋಷ್ಟಕಗಳಲ್ಲಿ ಈ ಯೋಜನೆಯನ್ನು ಹೇಗೆ ಅನುಷ್ಠಾನಗೊಳಿಸಬಹುದು

ಎನ್ನುವುದನ್ನು ನಾವು ತೋರಿಸುತ್ತೇವೆ. ನಾವು ಪ್ರಸ್ತಾಪಿಸುತ್ತಿರುವ ಮೌಲ್ಯಗಳು ಪರೀಕ್ಷಾರ್ಥಕವಾಗಿದ್ದು, ಮಿತಿಯಿಂದ ಕೂಡಿದ ಮಾಹಿತಿಯನ್ನು ಅವಲಂಬಿಸಿವೆ ಹಾಗೂ ಈ ಯೋಜನೆಯು ಹೇಗೆ ಕೆಲಸ ಮಾಡುತ್ತದೆ ಎಂದು ತೋರಿಸುವ ಉದ್ದೇಶವನ್ನಷ್ಟೆ ಹೊಂದಿವೆ ಎಂಬ ಅಂಶಕ್ಕೆ ಒತ್ತು ನೀಡುವುದು ಅಗತ್ಯ. ಶೈಕ್ಷಣಿಕ ಸಾಧನೆಗೆ ಮತ್ತು ಸಾಮಾಜಿಕ ಅನನುಕೂಲತೆಗಳಿಗೆ ಕೊಡಬೇಕಾದ ನಿಖರವಾದ ಮೌಲ್ಯವು ಬಹಳ ಮುಖ್ಯವಾದ ಅಂಶವಾಗಿದೆ ಮತ್ತು ಅದನ್ನು ಹೆಚ್ಚು ಪುರಾವೆಗಳನ್ನು ಪರಿಶೀಲಿಸಿದ ನಂತರವಷ್ಟೆ ನಿರ್ಧರಿಸಲು ಸಾಧ್ಯ; ಇದು ೯೦:೧೦ ಆಗಿರಬಹುದು ಅಥವಾ ೭೦:೩೦ ಆಗಿರಬಹುದು ಅಥವಾ ಮತ್ತಾವುದೊ ಅನುಪಾತವಾಗಿರಬಹುದು. ಕೇವಲ ಒಂದು ಚಿತ್ರಣವನ್ನು ಕೊಡುವ ದೃಷ್ಟಿಯಿಂದ ನಾವು ಇಲ್ಲಿ ೮೦:೨೦ ಅನುಪಾತ ಎಂದಿಟ್ಟುಕೊಂಡಿದ್ದೇವೆ. ಅಂದರೆ ಸಾಮಾಜಿಕ ಅನನುಕೂಲತೆಯ ಅಂಕವು ೦-೨೦ ಇದ್ದಾಗ ಶೈಕ್ಷಣಿಕ ಅಂಕವನ್ನು ೦-೮೦ ಅಳತೆಯಲ್ಲಿ ಒಂದು ಪ್ರಮಾಣೀಕೃತ ಅಂಕವಾಗಿ ಪರಿವರ್ತಿಸಿಕೊಂಡಿದ್ದೇವೆ. (ಕೋಷ್ಟಕ ಎ೧, ಎ೨, ಬಿ ಮತ್ತು ಸಿ ಯ ಪ್ರಕಾರ ಸೈದ್ಧಾಂತಿಕವಾಗಿ ಅಭ್ಯರ್ಥಿಗಳಿಗೆ ಅದಕ್ಕಿಂತಲೂ ಹೆಚ್ಚು ಅಂಕಗಳನ್ನು ಪಡೆಯಲು ಸಾಧ್ಯವಿದ್ದರೂ ಕೂಡ ಸಾಮಾಜಿಕ ಅನನುಕೂಲತೆಯ ಅಂಕವನ್ನು ಗರಿಷ್ಟ ೨೦ರ ಮಿತಿಗೆ ಒಳಪಡಿಸಲಾಗಿದೆ ಎನ್ನುವುದನ್ನು ಗಮನಿಸಬೇಕು.)

ಕೋಷ್ಟಕ ಎ೧ ಮತ್ತು ಎ೨, ಗುಂಪಿನ ಅನನುಕೂಲತೆಗಳ ಅಂಕಗಳನ್ನು ಅನುಕ್ರಮವಾಗಿ ಗ್ರಾಮ ಹಾಗೂ ನಗರದಲ್ಲಿ ನೆಲೆಸಿರುವವರಿಗೆ ಹೇಗೆ ಕೊಡಬಹುದು ಎನ್ನುವುದನ್ನು ತೋರಿಸುತ್ತವೆ. (ಈಗಾಗಲೆ ಹೇಳಿರುವಂತೆ ಹತ್ತನೆ ತರಗತಿಯ ಪರೀಕ್ಷೆಯನ್ನು ತೆಗೆದುಕೊಂಡ ಶಾಲೆ ಎಲ್ಲಿದೆ ಎನ್ನುವುದರ ಆಧಾರದಲ್ಲಿ ವಾಸಸ್ಥಳವನ್ನು ನಿರ್ಧರಿಸಲಾಗುತ್ತದೆ. ಬಹುತೇಕ ಅರ್ಜಿ ನಮೂನೆಗಳಿಂದ ಈ ಮಾಹಿತಿಯು ಮಾದರಿಯಾಗಿ ಅದಾಗಲೇ ಲಭ್ಯವಿದೆ) ಗುಂಪಿನ ಅನನುಕೂಲತೆಯ ಮೂರು ಅಕ್ಷಗಳನ್ನು ಇಲ್ಲಿ ಪರಿಗಣಿಸಲಾಗಿದೆ: ಒಬ್ಬ ವ್ಯಕ್ತಿಯಿರುವ ಪ್ರದೇಶದ ಸಾಪೇಕ್ಷ ಹಿಂದುಳಿದಿರುವಿಕೆ, ವ್ಯಕ್ತಿಯ ಜಾತಿ ಹಾಗೂ ಸಮುದಾಯ, (ಪ.ಜಾ ಹಾಗೂ ಪ.ಪಂ.ಗಳಲ್ಲದ ಗುಂಪುಗಳನ್ನು ಮಾತ್ರ ಇಲ್ಲಿ ಪರಿಗಣಿಸಲಾಗಿದೆ). ಮತ್ತು ವ್ಯಕ್ತಿಯ ಲಿಂಗ. ಅತ್ಯಂತ ಮೇಲಿನ ಸಾಲಿನಲ್ಲಿರುವ ವಲಯಗಳು ಹಿಂದುಳಿದಿರುವಿಕೆಯ ಸಾಮಾನ್ಯ ಸೂಚಕಗಳನ್ನು ಆಧರಿಸಿದ ಪ್ರದೇಶಗಳ ವರ್ಗೀಕರಣವನ್ನು ಸೂಚಿಸುತ್ತವೆ – ಇದು ರಾಜ್ಯ, ಉಪ ರಾಜ್ಯ ಪ್ರದೇಶವಾಗಿರಬಹುದು ಅಥವಾ ಜಿಲ್ಲಾ ಮಟ್ಟದ್ದೂ ಆಗಿರಬಹುದು. ಹಾಗಾಗಿ ವಲಯ ೧, ಅತ್ಯಂತ ಹಿಂದುಳಿದ ಪ್ರದೇಶವಾಗಿದ್ದರೆ ವಲಯ ೩, ಅತ್ಯಂತ ಅಭಿವೃದ್ಧಿ ಹೊಂದಿದ ಪ್ರದೇಶವಾಗಿದೆ. ಹಾಗಾಗಿ, ಪ್ರತಿಯೊಂದು ಜಾತಿ ಗುಂಪುಗಳು ಮತ್ತು ಲಿಂಗಕ್ಕೆ ಅನನುಕೂಲತೆಯ ಅಂಕಗಳು ಎಡದಿಂದ ಬಲಕ್ಕೆ ಕಡಿಮೆಯಾಗುತ್ತಾ ಹೋಗುತ್ತವೆ. ಇಲ್ಲಿ ಗುರುತಿಸಲಾದ ಜಾತಿ ಮತ್ತು ಸಮುದಾಯಗಳನ್ನು ವಿಶಾಲವಾಗಿ ಒಂದೇ ತೆರನಾದ ಬಡತನ ಮತ್ತು ಶೈಕ್ಷಣಿಕ ಸೂಚಕಗಳ ಹಂತಗಳ ಪ್ರಕಾರ ಒಟ್ಟುಗೂಡಿಸಲಾಗಿದೆ (ಈ ಹಿಂದಿನ ಹಾಗೆ ಇದರ ವಿವರಗಳ ಬಗ್ಗೆ ಒಮ್ಮತಕ್ಕೆ ಬರಬಹುದು). ಕೆಳ ಹಂತದ ಇ.ಹಿಂ.ಜಾತಿಗಳು ಮತ್ತು ಅತ್ಯಂತ ಹಿಂದುಳಿದ ಜಾತಿಗಳು (ರಾಜ್ಯ ಪಟ್ಟಿಯಲ್ಲಿ ಅಥವಾ ರಾಷ್ಟ್ರೀಯ ಹಿಂದುಳಿದ ಜಾತಿಗಳ ಆಯೋಗದ ಮಾನದಂಡದಂತೆ) ಮತ್ತು ಇವರೊಟ್ಟಿಗೆ ಮುಸ್ಲಿಮರಲ್ಲಿರುವ ಇ.ಹಿಂ.ಜಾತಿಗಳವರನ್ನು ಶಿಕ್ಷಣ ಪಡೆದವರಲ್ಲಿ ಮತ್ತು ಸಂಪತ್ತನ್ನು ಹೊಂದಿದ್ದರವರಲ್ಲಿ ಅತ್ಯಂತ ಅನನುಕೂಲತೆಗೊಳಪಟ್ಟಿರುವ ಅಥವಾ ಅತ್ಯಂತ ಕನಿಷ್ಟ ಮಟ್ಟದ ಪ್ರಾತಿನಿಧ್ಯ ಹೊಂದಿರುವವರೆಂದು ಪರಿಗಣಿಸಿದರೆ ಮೇಲ್ಜಾತಿ ಹಿಂದೂಗಳು, ಸಿಖ್ಖರು (ಪ.ಜಾ. ಮತ್ತು ಇ.ಹಿಂ.ಜಾ.ಗಳಲ್ಲದ) ಕ್ರಿಶ್ಚಿಯನ್ನರು (ಪ.ಪಂ. ಮತ್ತು ಇ.ಹಿಂ.ಜಾ.ಗಳಲ್ಲದ), ಜೈನರು, ಪಾರಸಿಗಳು ಇತ್ಯಾದಿಗಳವರನ್ನು ಅತ್ಯಂತ ಮುಂದುವರೆದ ಜಾತಿಗಳು ಎಂದು ಪರಿಗಣಿಸಲಾಗಿದೆ. ಹಾಗಾಗಿ ಅನನುಕೂಲತೆಗಳ ಅಂಕಗಳು ಮೇಲಿನಿಂದ ಕೆಳಕ್ಕೆ ಕಡಿಮೆಯಾಗುತ್ತಾ ಹೋಗುತ್ತವೆ. ಮಹಿಳೆಯರಿಗೆ ಅನನುಕೂಲತೆಗಳ ಅಂಕಗಳನ್ನು ಅವರ ಇತರೆ ಲಕ್ಷಣಗಳನ್ನು ಅಂದರೆ, ಜಾತಿ ಮತ್ತು ಪ್ರದೇಶವನ್ನು ಆಧರಿಸಿ ನೀಡಿರುವುದರಿಂದ ಲಿಂಗವು ಈ ವ್ಯೂಹದ ಅಂತರ್ಗತ ಅಂಶವಾಗಿದೆ. ಹಾಗಾಗಿ ಈ ಕೋಷ್ಟಕಗಳಲ್ಲಿರುವ ಊಹಾತ್ಮಕ ಸಂಖ್ಯೆಗಳು ಎಲ್ಲ ನಾಲ್ಕು ಮಾನದಂಡಗಳ ಅಂದರೆ ಜಾತಿ, ಸಮುದಾಯ, ಲಿಂಗ ಮತ್ತು ಪ್ರದೇಶಗಳ ಆಧಾರವನ್ನು ಅನುಸರಿಸಿ ಗ್ರಾಮೀಣ ಹಾಗೂ ನಗರ ವಲಯಗಳಿಗೆ ಪ್ರತ್ಯೇಕವಾಗಿ ಸಾಪೇಕ್ಷ ಅನನುಕೂಲತೆಗಳ ವಿಬಿನ್ನ ಪ್ರಮಾಣಗಳನ್ನು ಸೂಚಿಸುತ್ತವೆ. ಎಲ್ಲಕ್ಕಿಂತ ಮುಖ್ಯವಾಗಿ ಕೋಷ್ಟಕಗಳು ಈ ಚರಾಂಶಗಳ ನಡುವಿನ ಪರಸ್ಪರ ಸಂವಹನದ ಪರಿಣಾಮಗಳನ್ನು ಪರಿಣಾಮಕಾರಿಯಾಗಿ ಹಿಡಿದಿಡುತ್ತವೆ. ಹಾಗಾಗಿ ಅತ್ಯಂತ ಹಿಂದುಳಿದ ಪ್ರದೇಶಕ್ಕೆ ಸೇರಿದ ಇ.ಹಿಂ.ಜಾ.ಯ ಮಹಿಳೆ ಅಥವಾ ಇ.ಹಿಂ.ಜಾ.ಯ ಮುಸ್ಲಿಂ ಮಹಿಳೆಯು ಗ್ರಾಮೀಣ ಪ್ರದೇಶಕ್ಕೆ ಸೇರಿದ್ದರೆ ಅತ್ಯಂತ ಗರಿಷ್ಟ ೨೦ ಅಂಕಗಳನ್ನು, ಹತ್ತು ಲಕ್ಷ ಜನಸಂಖ್ಯೆಗಿಂತ ಕಡಿಮೆ ಇರುವ ನಗರ ಪ್ರದೇಶಕ್ಕೆ ಸೇರಿದ್ದರೆ ೧೪ ಅಂಕಗಳನ್ನು ಪಡೆಯುತ್ತಾಳೆ. ಮತ್ತೊಂದು ತುದಿಯಿಂದ ಅಭಿವೃದ್ಧಿ

ಹೊಂದಿದ ಪ್ರದೇಶದಿಂದ ಬಂದ ಮುಂದುವರೆದ ಜಾತಿಯ ಪುರುಷನು ನಗರ ಪ್ರದೇಶದಿಂದ ಬಂದವನಾಗಿದ್ದರೆ ಯಾವುದೇ ಅನನುಕೂಲತೆಯ ಅಂಕಗಳನ್ನು ಪಡೆಯುವುದಿಲ್ಲ, ಆದರೆ ಗ್ರಾಮೀಣ ಪ್ರದೇಶದಿಂದ ಬಂದವನಾಗಿದ್ದರೆ ೬ ಅಂಕಗಳನ್ನು ಪಡೆಯುತ್ತಾನೆ.

**ಕೋಷ್ಟಕ ಎ೧: ಗ್ರಾಮೀಣ ವಿದ್ಯಾರ್ಥಿಗಳ ಗುಂಪಿನ ಅನನುಕೂಲತೆಗಳು: ಜಾತಿ, ಸಮುದಾಯ, ಪ್ರದೇಶ ಹಾಗೂ ಲಿಂಗ**

| ಸಮುದಾಯ/ ವಲಯಗಳು | | ವಲಯ ೧ ಅತ್ಯಂತ ಹಿಂದುಳಿದ | ವಲಯ ೨ | ವಲಯ ೩ ಅತ್ಯಂತ ಅಭಿವೃದ್ಧಿ ಹೊಂದಿದ |
|---|---|---|---|---|
| "ಕೆಳ ಹಂತದ" ಇ.ಹಿ.ಜಾ/ ಅತ್ಯಂತ ಹಿಂ.ಜಾತಿ/ಮುಸ್ಲಿಂ | ಮಹಿಳೆ | ೨೦ | ೧೮ | ೧೬ |
| ಇ.ಹಿ.ಜಾ | ಪುರುಷ | ೧೬ | ೧೪ | ೧೨ |
| "ಮೇಲಿನ ಹಂತದ" ಇ.ಹಿಂ.ಜಾ. ಇ.ಹಿಂ.ಜಾ.ಗಳಲ್ಲದ | ಮಹಿಳೆ | ೧೮ | ೧೬ | ೧೪ |
| ಮುಸ್ಲಿಂ | ಪುರುಷ | ೧೫ | ೧೩ | ೧೧ |
| ಇತರೆ ಎಲ್ಲ | ಮಹಿಳೆ | ೧೨ | ೧೦ | ೦೮ |
| | ಪುರುಷ | ೧೦ | ೮ | ೬ |

**ಕೋಷ್ಟಕ ಎ೨: ನಗರ ಪ್ರದೇಶದ ವಿದ್ಯಾರ್ಥಿಗಳಿಗಿರುವ ಗುಂಪಿನ ಅನನುಕೂಲತೆಗಳು: ಜಾತಿ-ಸಮುದಾಯ, ನಗರದ ಗಾತ್ರ ಮತ್ತು ಲಿಂಗ**

| ಸಮುದಾಯ/ ವಲಯಗಳು | | ಒಂದು ಲಕ್ಷದವರೆಗೆ | ಐದು ಲಕ್ಷದವರೆಗೆ | ಹತ್ತು ಲಕ್ಷದವರೆಗೆ | ದಶಲಕ್ಷಕ್ಕೂ ಹೆಚ್ಚು ನಗರಗಳು |
|---|---|---|---|---|---|
| "ಕೆಳ ಹಂತದ" ಇ.ಹಿಂ.ಜಾ/ ಅತ್ಯಂತ ಹಿಂ.ಜಾ | ಮಹಿಳೆ | ೧೪ | ೧೨ | ೧೦ | ೮ |
| ಮುಸ್ಲಿಂ ಇ.ಹಿ.ಜಾ | ಪುರುಷ | ೧೧ | ೯ | ೭ | ೫ |
| "ಮೇಲಿನ ಹಂತದ" ಇ.ಹಿಂ.ಜಾ./ | ಮಹಿಳೆ | ೧೨ | ೧೦ | ೮ | ೬ |
| ಇ.ಹಿಂ.ಜಾ. ಗಳಲ್ಲದ ಮುಸ್ಲಿಂ | ಪುರುಷ | ೧೦ | ೮ | ೬ | ೪ |
| ಇತರೆ ಎಲ್ಲ | ಮಹಿಳೆ | ೪ | ೩ | ೨ | ೧ |
| | ಪುರುಷ | ೨ | ೧ | ೦ | ೦ |

*ಟಿಪ್ಪಣಿ: (೧) ಅಭ್ಯರ್ಥಿಗಳ ಪೋಷಕರು ಕೆನೆಪದರ ವಿಭಾಗದಲ್ಲಿದ್ದರೆ (ರಾಷ್ಟ್ರೀಯ ಹಿಂದುಳಿದ ಜಾತಿಗಳ ಆಯೋಗವು ವ್ಯಾಖ್ಯಾನಿಸಿದ ರೀತಿಯಲ್ಲಿ) ಅವರಿಗೆ ಗುಂಪಿನ ಅನನುಕೂಲತೆಯ ಅಂಕಗಳು ಕೋಷ್ಟಕ ಎ೧ ಹಾಗು ಎ೨ ರಲ್ಲಿರುವ ಅರ್ಧದಷ್ಟಿರುತ್ತದೆ.*

*(೨) ಕೆಳ ಹಂತದ ಹಾಗೂ ಮೇಲಿನ ಹಂತದ ಇ.ಹಿಂ,ಜಾ.ಯ ಪಟ್ಟಿಗಳನ್ನು ರಾಷ್ಟ್ರೀಯ ಹಿಂದುಳಿದ ಆಯೋಗವು*

*ತಯಾರಿಸುತ್ತದೆ.*
*(೩) ವಲಯಗಳನ್ನು ಜಿಲ್ಲೆಗಳು ವರ್ಗೀಕರಿಸುತ್ತವೆ. ಅಭ್ಯರ್ಥಿಯ ಶಾಲೆಯು ಇರುವ ಜಿಲ್ಲೆಯನ್ನು ಅಭ್ಯರ್ಥಿಯ ಜಿಲ್ಲೆಯೆಂದು ಭಾವಿಸಲಾಗುತ್ತದೆ. ಪ್ರಾರಂಭಿಕವಾಗಿ ಜಿಲ್ಲೆಗಳ ಜಿ.ಎನ್.ಯು ವರ್ಗೀಕರಣವನ್ನು ಒಪ್ಪಿಕೊಳ್ಳಬಹುದು.*
*(೪) ಇಲ್ಲಿ ಕೊಟ್ಟಿರುವ ಅಂಕಗಳು ಕೇವಲ ಸೂಚಕವಾಗಿವೆ. ಯೋಜನೆಯನ್ನು ಕಾರ್ಯಗತಗೊಳಿಸುವಾಗ ಈ ಅಂಕಗಳನ್ನು ಪ್ರತಿ ಕೋಷ್ಟಕದ ಕೋಶದಲ್ಲಿ ಉಲ್ಲೇಖಿಸಿರುವ ಪ್ರತಿಯೊಂದು ಸಾಮಾಜಿಕ ಗುಂಪುಗಳು ಮತ್ತು ವರ್ಗಗಳ ಶೈಕ್ಷಣಿಕ ಅನನುಕೂಲತೆಗಳ ದತ್ತಾಂಶಗಳಿಂದ ತೆಗೆದುಕೊಂಡು ಅವುಗಳಿಗೆ ಸೇರಿಸಬೇಕಾಗುತ್ತದೆ.*

## ಕೋಷ್ಟಕ ಬಿ: ವ್ಯಕ್ತಿಗತ ಅನನುಕೂಲತೆ: ಶಾಲಾ ಕಲಿಕೆಯ ವಿಧಗಳು

| | ಗ್ರಾಮ/ಪಟ್ಟಣ ೨೦೦೦೦ದವರೆಗೆ | ಪಟ್ಟಣ ೧,೦೦,೦೦೦ದವರೆಗೆ | ನಗರ ೧೦,೦೦,೦೦೦ | ಹತ್ತು ದಶಕಕ್ಕೂ ಮೀರಿದ ನಗರಗಳು |
|---|---|---|---|---|
| ಸಾಧಾರಣ ಸರಕಾರಿ ಶಾಲೆ | ೬ | ೫ | ೪ | ೩ |
| ಖಾಸಗಿ ಶಾಲೆ (ಆಂಗ್ಲ ಮಾಧ್ಯಮವಲ್ಲದ) | ೩ | ೨ | ೧ | ೦ |
| ಖಾಸಗಿ ಶಾಲೆ (ಆಂಗ್ಲ ಮಾಧ್ಯಮ) | ೨ | ೧ | ೦ | ೦ |
| ವಿಶೇಷ ಸರಕಾರಿ ವಸತಿ ಶಾಲೆ (ನವೋದಯ/ಸೈನಿಕ್) | ೧ | ೧ | ೦ | ೦ |
| ಉತ್ತಮ ದರ್ಜೆಯ/ ಸರಕಾರಿ ವಸತಿ ಶಾಲೆ | ೦ | ೦ | ೦ | ೦ |

## ಕೋಷ್ಟಕ ಸಿ: ವ್ಯಕ್ತಿಗತ ಅನನುಕೂಲತೆಗಳು: ಕೌಟುಂಬಿಕ ಹಿನ್ನೆಲೆ

| ತಾಯಿಯ ಉದ್ಯೋಗ | | ತಂದೆಯ ಉದ್ಯೋಗ | |
|---|---|---|---|
| | ನಿರ್ವಾಹಕ/ ವೃತ್ತಿಪರ/ ದೊಡ್ಡ ಉದ್ಯಮ/ ವರ್ಗ ೧ ಮತ್ತು ೨ | ಗುಮಾಸ್ತ/ಕೆಳ ಹಂತದ ವೃತ್ತಿಪರ ಮಧ್ಯಮ ಉದ್ಯಮ/ ವರ್ಗ ೩ ಮತ್ತು ೪ | ಇತರ ಎಲ್ಲ |
| ನಿರ್ವಾಹಕ/ ವೃತ್ತಿಪರ/ ದೊಡ್ಡ ಉದ್ದಿಮೆ/ ವರ್ಗ ೧ ಮತ್ತು ೨ | ೦ | ೦ | ೦ |
| ಗುಮಾಸ್ತ/ಕೆಳ ಹಂತದ ವೃತ್ತಿಪರ/ ಮಧ್ಯಮ ಉದ್ದಿಮೆ/ ವರ್ಗ ೩ ಮತ್ತು ೪ | ೦ | ೧ | ೨ |
| ಇತರ ಎಲ್ಲ (ಆದಾಯ ತೆರಿಗೆ ಇಲ್ಲದವರು) | ೦ | ೨ | ೪ |

ವ್ಯಕ್ತಿಗತ ಅನನುಕೂಲತೆಯನ್ನು ನಿರ್ಧರಿಸುವಲ್ಲಿ ಬಿ ಮತ್ತು ಸಿ ಕೋಷ್ಟಕಗಳು ಇದೇ ರೀತಿ ಕಾರ್ಯನಿರ್ವಹಿಸುತ್ತವೆ. ಈ ಕೋಷ್ಟಕಗಳಲ್ಲಿ ಎಲ್ಲ ಗುಂಪಿನ ಚರಾಂಶಗಳನ್ನು ಹೊರಗಿಡಲಾಗಿದೆ. ಕೋಷ್ಟಕ ಬಿ, ವ್ಯಕ್ತಿಯು ತನ್ನ ಮಾಧ್ಯಮಿಕ ಹಂತದ ಪರೀಕ್ಷೆಯನ್ನು ಯಾವ ರೀತಿಯ ಶಾಲೆಯಿಂದ ಉತ್ತೀರ್ಣನಾಗಿದ್ದಾನೆ/ಳೆ ಮತ್ತು ಆ ಶಾಲೆಯು ಇರುವ ಗ್ರಾಮ, ಪಟ್ಟಣ ಅಥವಾ ನಗರದ ಗಾತ್ರ/ವಿಸ್ತೀರ್ಣ ಎಷ್ಟು ಎನ್ನುವುದನ್ನು ನೋಡುತ್ತದೆ. ಹಳ್ಳಿ ಅಥವಾ ಪಟ್ಟಣದಲ್ಲಿರುವ ಸಾಧಾರಣವಾದ ಸರಕಾರಿ ಶಾಲೆಗೆ ಹೋಗುವ ಯಾರಿಗಾದರೂ ಈ ವ್ಯೂಹದಲ್ಲಿ ಗರಿಷ್ಟ ಆರು ಅಂಕಗಳು ದೊರೆಯುತ್ತವೆ. ಗಮನಿಸಲಾದ ಶಾಲೆಯ ಶಿಕ್ಷಣ ಗುಣಮಟ್ಟ ಮತ್ತು ಒಳಗೊಂಡಿರುವ ಕುಟುಂಬದ ಸಂಪನ್ಮೂಲಗಳನ್ನು ಆಧರಿಸಿ ಶಾಲೆಗಳನ್ನು ಶ್ರೇಣೀಕರಿಸಲಾಗಿದೆ ಮತ್ತು ಇದನ್ನು ಪರಿಷ್ಕರಿಸಲು ಸಹ ಸಾಧ್ಯವಿದೆ. ದೊಡ್ಡ ನಗರದಲ್ಲಿರುವ ವಿಶೇಷ ಆಂಗ್ಲ ಮಾಧ್ಯಮದ ಪಬ್ಲಿಕ್

ಶಾಲೆಯಲ್ಲಿರುವ ವಿದ್ಯಾರ್ಥಿಯು ಯಾವುದೇ ಅನನುಕೂಲತೆಯ ಅಂಕವನ್ನು ಗಳಿಸುವುದಿಲ್ಲ.

ಕೋಷ್ಟಕ ಸಿ, ಕುಟುಂಬದ ಸಂಪನ್ಮೂಲಗಳಿಗೆ (ಅಂದರೆ, ನೇರವಾಗಿ ಖಾತ್ರಿಗೊಳಿಸಿಕೊಳ್ಳಲು ಅಸಾಧ್ಯವಾದ ಆದಾಯ, ಸಂಪತ್ತು ಇತ್ಯಾದಿ) ಬದಲಿಯಾಗಿ ಹೆತ್ತವರ ಉದ್ಯೋಗವನ್ನು ನೋಡುತ್ತದೆ. ಇಲ್ಲಿ ನಾವು ಗರಿಷ್ಟ ಅಂಕಗಳನ್ನು ಆರಕ್ಕೆ ಮಿತಿಗೊಳಿಸಿದ್ದೇವೆ, ಆದರೆ ನಮ್ಮ ಅನುಭವದ ಆಧಾರದ ಮೇಲೆ ಇದನ್ನು ಬದಲಿಸಬಹುದು. ಸಂಘಟಿತ ವಲಯದ ಆಚೆ ಇರುವ ಮತ್ತು ಆದಾಯವು ತೆರಿಗೆಯ ಮಿತಿಯಿಂದ ಕೆಳಗಿರುವ ಪೋಷಕರ ಮಕ್ಕಳು ಗರಿಷ್ಟ ಅಂಕಗಳನ್ನು ಪಡೆಯುತ್ತಾರೆ ಮತ್ತು ಇಲ್ಲಿ ಪೋಷಕರಿಬ್ಬರ ಉದ್ಯೋಗವನ್ನು ಪರಿಗಣಿಸಲಾಗುತ್ತದೆ. ಪೋಷಕರಲ್ಲಿ ಯಾರಾದರೊಬ್ಬರು ವರ್ಗ ೧ ಅಥವಾ ವರ್ಗ ೨ರ ಸರಕಾರಿ ಹುದ್ದೆಯಲ್ಲಿದ್ದರೆ ಅಥವಾ ನಿರ್ವಹಣಾ ಅಥವಾ ವೃತ್ತಿಪರ ಉದ್ಯೋಗದಲ್ಲಿದ್ದರೆ ಅಂತಹವರು ಯಾವುದೇ ಅಂಕಗಳನ್ನು ಪಡೆದುಕೊಳ್ಳುವುದಿಲ್ಲ. ಸಂಘಟಿತ ವಲಯದಲ್ಲಿ ಮಧ್ಯಂತರ ಹುದ್ದೆಯಲ್ಲಿರುವವರನ್ನು, ಸರ್ಕಾರದ ವರ್ಗ ೩ ಹಾಗೂ ವರ್ಗ ೪ರ ಹುದ್ದೆಗಳನ್ನೂ ಒಳಗೊಂಡಂತೆ, ಅಸಂಘಟಿತ ವಲಯದ, ಕಡಿಮೆ ಸಂಬಳ ಪಡೆಯುತ್ತಿರುವವರಿಗಿಂತ ಉತ್ತಮ ಸ್ಥಿತಿಯಲ್ಲಿದ್ದಾರೆ ಎಂದು ಗುರುತಿಸಲಾಗಿದೆ.

ಮೂರು ವ್ಯೂಹಗಳ ಅಂಕಗಳನ್ನು ಒಟ್ಟಾಗಿಸಿದರೆ ಅನನುಕೂಲತೆಯ ಒಟ್ಟು ಅಂಕ ಸಿಗುತ್ತದೆ. ಅದನ್ನು ನಂತರ ಪ್ರಮಾಣೀಕೃತ ಶೈಕ್ಷಣಿಕ ಅರ್ಹತಾ ಅಂಕಗಳಿಗೆ ಸೇರಿಸಿದರೆ ಪ್ರತಿ ಅಭ್ಯರ್ಥಿಯ ಅಂತಿಮ ಅಂಕವನ್ನು ಕೊಡಬಹುದು. ಪ.ಜಾ. ಮತ್ತು ಪ.ಪಂ.ಗಳಲ್ಲದ ಎಲ್ಲ ಅಭ್ಯರ್ಥಿಗಳಿಗೆ ಪ್ರವೇಶಾತಿಯು (ಅಂದರೆ ಎಲ್ಲ ಸೀಟುಗಳ ಶೇಕಡಾ ೭೭.೫ರಷ್ಟು) ನಂತರದಲ್ಲಿ ಈ ಒಟ್ಟುಅಂಕಗಳನ್ನು ಆಧರಿಸಬಹುದು.

## ನಿರ್ದಿಷ್ಟತೆಗಳು ಮತ್ತು ಅನುಕೂಲಗಳು

ಜಾತಿ-ಗುಂಪಿನ ಕೋಟಾ (ಸರಕಾರವು ಪೂರ್ವನಿಯೋಜಿತವಾಗಿ ಅಳವಡಿಸಿಕೊಂಡಿರುವ) ಮತ್ತು ನಮ್ಮ ಪ್ರಸ್ತಾವನೆಗಳಂತಹವುಗಳು ಸಕಾರಾತ್ಮಕ ಕ್ರಿಯೆಗೆ ಬದ್ಧತೆಯನ್ನು ಹೊಂದಿದ್ದು ಅದನ್ನು ಶೈಕ್ಷಣಿಕ ಅವಕಾಶಗಳಿಗೆ ವಿಸ್ತರಿಸಬಯಸಿದರೂ ಕೂಡ ನಮ್ಮ ಯೋಜನೆಯು ಹಲವು ವಿಧಗಳಲ್ಲಿ ಭಿನ್ನವಾಗಿದೆ. ಸರಕಾರದ ವಿಧಾನವು "ಮೀಸಲು" ಸ್ಥಾನಗಳ ಒಂದು ಗುಂಪನ್ನು ಸೃಷ್ಟಿಸುತ್ತದೆ. ನಮ್ಮ ಪ್ರಸ್ತಾವನೆಯು ಅಸ್ತಿತ್ವದಲ್ಲಿರುವ ಪ.ಜಾ. ಮತ್ತು ಪ.ಪಂ.ಗಳ ಮತ್ತು ಇತರೆ ವರ್ಗಗಳ ಮೀಸಲಾತಿಯನ್ನು ಹೊರತುಪಡಿಸಿದ ಎಲ್ಲ ಸ್ಥಾನಗಳಿಗೆ ಮತ್ತು ಇತರ ವರ್ಗಗಳಿಗೆ ಅನ್ವಯಿಸುತ್ತದೆ. ಸರಕಾರಿ ಪ್ರಸ್ತಾವನೆಯು ಕೇವಲ ಗುಂಪಿನ ಅನನುಕೂಲತೆಯನ್ನು ಗುರುತಿಸುತ್ತದೆ ಮತ್ತು ಜಾತಿಯನ್ನು ಶಿಕ್ಷಣದ ಅಸಮಾನತೆಗಳಲ್ಲಿನ ಗುಂಪು ಅನನುಕೂಲತೆಗಳ ಏಕಮಾತ್ರ ಮಾನದಂಡವಾಗಿ ಪರಿಗಣಿಸುತ್ತದೆ. ನಾವೂ ಸಹ ಗುಂಪಿನ ಅನನುಕೂಲತೆಗಳನ್ನು ಗುರುತಿಸುತ್ತೇವೆ ಮತ್ತು ಶಿಕ್ಷಣದ ಅಸಮಾನತೆಗಳಲ್ಲಿ ಜಾತಿಯು ಏಕಮಾತ್ರ ಅತ್ಯಂತ ಪ್ರಮುಖ ಸೂಚಕ ಎಂದು ಪರಿಗಣಿಸುತ್ತೇವೆ. ಆದರೆ ನಮ್ಮ ಯೋಜನೆಯು ಪ್ರದೇಶ ಮತ್ತು ಲಿಂಗದಂತಹ ಇತರ ಗುಂಪು ಅನನುಕೂಲತೆಗಳನ್ನು ಗುರುತಿಸುವ ಮೂಲಕ ಗುರುತಿಸುವಿಕೆಯನ್ನು ಮತ್ತಷ್ಟು ಸೂಕ್ತವಾಗಿಸುತ್ತದೆ. ಅದಕ್ಕಿಂತ ಹೆಚ್ಚಾಗಿ ನಮ್ಮ ಯೋಜನೆಯು ಅನನುಕೂಲತೆಗಳ ವಿಭಿನ್ನ ಅಕ್ಷಗಳ (ಪ್ರದೇಶ, ಜಾತಿ, ಲಿಂಗ, ಅಥವಾ ಶಾಲೆಯ ಪ್ರಕಾರ ಮತ್ತು ಸ್ಥಳದ ಪ್ರಕಾರದಂತಹ) ನಡುವಿನ ಪರಸ್ಪರ ಸಂವಹನದ ಪರಿಣಾಮವನ್ನು ಕಂಡುಕೊಳ್ಳುವ ಸಾಮರ್ಥ್ಯವನ್ನು ಉದ್ದೇಶಿಸಿದೆ. ಗುಂಪಿನ ಅನನುಕೂಲತೆಗಳನ್ನು ಗುರುತಿಸುವಾಗ ನಮ್ಮ ಯೋಜನೆಯು ಕೌಟುಂಬಿಕ ಹಿನ್ನೆಲೆ ಮತ್ತು ಶಾಲೆಯ ಮಾದರಿಗಳಿಗೆ ಸಂಬಂಧಿಸಿದ ವ್ಯಕ್ತಿಗತ ಅನನುಕೂಲತೆಗಳಿಗೂ ಮೌಲ್ಯವನ್ನು ನೀಡುತ್ತದೆ. ಎಲ್ಲ ಜಾತಿಗಳ ಜನರೂ ಕೂಡ ವ್ಯಕ್ತಿಗತವಾದ ಅನನುಕೂಲತೆಗಳನ್ನು ಅನುಭವಿಸುತ್ತಾರೆ ಎನ್ನುವುದನ್ನೂ ಕೂಡ ನಮ್ಮ ಯೋಜನೆಯು ಗುರುತಿಸುತ್ತದೆ ಮತ್ತು ಅಂತಹ ಅನನುಕೂಲತೆಗಳಿಗೆ ಪರಿಹಾರವನ್ನು ಮೇಲ್ಜಾತಿಯವರಿಗೂ ಕೂಡ ಒದಗಿಸುತ್ತದೆ. ಅನನುಕೂಲತೆಯಯನ್ನು ಗುರುತಿಸುವಾಗ ಎಲ್ಲ ಅಥವಾ ಏನೂ ಇಲ್ಲ (ನೀವು ಇ.ಹಿಂ.ಜಾ.ಯವರಾಗಿದ್ದೀರಿ ಇಲ್ಲವೆ ನೀವು ಏನೂ ಅಲ್ಲ) ಎನ್ನುವ ದೃಷ್ಟಿಕೋನ ಸರಕಾರದ್ದಾಗಿದ್ದರೆ ನಮ್ಮ ಯೋಜನೆಯು ಅನನುಕೂಲತೆಯ ಪ್ರಮಾಣದಲ್ಲಿರುವ ವ್ಯತ್ಯಾಸಗಳನ್ನು ಗುರುತಿಸುವಲ್ಲಿ ನಮ್ಯತೆಗೆ ಅವಕಾಶವನ್ನು ನೀಡುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ನಾವು ಇಲ್ಲಿ ಪ್ರಸ್ತಾಪಿಸುತ್ತಿರುವ ಯೋಜನೆಯು ಹೊಸತೇನಲ್ಲ- ಕೆಲವು ಕಾಲದಿಂದಲೂ ಇಂತಹ ಚಿಂತನೆಗಳು ನಮ್ಮ ಸುತ್ತಮುತ್ತ ಇದ್ದಂತಹವುಗಳೆ. ಉನ್ನತ ಶಿಕ್ಷಣಕ್ಕಾಗಿ ಪ್ರಖ್ಯಾತ ಅಂತಾರಾಷ್ಟ್ರೀಯ ಫೆಲೋಶಿಪ್‌ಗೆ ಆಯ್ಕೆಯ ಪ್ರಕ್ರಿಯೆಯ ನಿಟ್ಟಿನ ಇಂತಹ ಯೋಜನೆಯನ್ನು ರೂಪಿಸುವ ಮತ್ತು ಅನುಷ್ಠಾನಗೊಳಿಸುವ ಕೆಲಸದಲ್ಲಿ ನಮ್ಮನ್ನು ತೊಡಗಿಸಿಕೊಂಡಿದ್ದೆವು. ಕೆಲವು ವರ್ಷಗಳ ಕಾಲ ಅಲ್ಲಿ ಅದು ಯಶಸ್ವಿಯಾಯಿತೂ ಕೂಡ.

ಜವಾಹರಲಾಲ್ ವಿಶ್ವವಿದ್ಯಾಲಯದ ನಿಯಮಾನುಸಾರ ಪ್ರವೇಶಾತಿಯಲ್ಲಿ ಇದೇ ತರಹದ ಯೋಜನೆಯನ್ನು ಕಾರ್ಯಗತಗೊಳಿಸಲಾಗುತ್ತಿದೆ. ಇದಕ್ಕೆ ಸಂಬಂಧಿಸಿದಂತೆ ಮತ್ತು ಇದಕ್ಕಿಂತ ಸ್ವಲ್ಪ ಭಿನ್ನವಾದ ಯೋಜನೆಯನ್ನು ಜವಾಹರಲಾಲ್ ವಿಶ್ವವಿದ್ಯಾಲಯದ ಪುರುಷೋತ್ತಮ್ ಅಗರ್‌ವಾಲ್ ಅವರು ಸೂಚಿಸಿದ್ದಾರೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಇಂತಹ ಆಲೋಚನೆಗಳು ವ್ಯಾಪಕವಾದ ಮಾನ್ಯತೆಯನ್ನು ಪಡೆದಿವೆ ಮತ್ತು ವಿವಿಧ ಪಂಡಿತರುಗಳು ಮತ್ತು ಆಡಳಿತಗಾರರು ಸ್ವತಂತ್ರವಾಗಿ ಬೇರೆ ಬೇರೆ ಸಂದರ್ಭಗಳಲ್ಲಿ ಇಂತಹುದೇ ನಿರ್ಣಯಕ್ಕೆ ಬಂದಿದ್ದಾರೆ. ಜಾತಿ ಕೋಟಾದ ಅತ್ಯಂತ ಸರಳವಾದ ಆಯ್ಕೆಯ ಸಾಧ್ಯತೆಗಿಂತ ಇದು ಅತ್ಯಂತ ಸಂಕೀರ್ಣವಾಗಿದ್ದರೂ ಕೂಡ ಕೆಲವು ಸಂದರ್ಭಗಳಲ್ಲಿ ವಿಶಾಲವಾದ ವ್ಯಾಪ್ತಿಯನ್ನು ಹೊಂದಿದ್ದರೂ ಕೂಡ ವಾಸ್ತವದಲ್ಲಿ ಅದನ್ನು ಆಚರಣೆಗೆ ತರಲು ಖಂಡಿತವಾಗಿಯೂ ಸಾಧ್ಯವಿದೆ.

ಅಂತಿಮವಾಗಿ, ನಾವು ಪ್ರಸ್ತಾವಿಸುತ್ತಿರುವ ಯೋಜನೆಯಲ್ಲಿರುವ ಅತ್ಯಂತ ವಿಶಿಷ್ಟವಾದ ಅನುಕೂಲತೆಯೆಂದರೆ ಇದು ರಚನಾತ್ಮಕ ಹಾಗೂ ವೈಚಾರಿಕ ನೆಲೆಯಲ್ಲಿ ಸಾಮಾಜಿಕ ನ್ಯಾಯದ ಚಿಂತನೆಗಳನ್ನು ರೂಢಿಸಲು ನೆರವಾಗುತ್ತದೆ. ಜಾತಿಯಾಧಾರಿತ ಸಕಾರಾತ್ಮಕ ಕ್ರಿಯೆಯ ನೀತಿಗಳಲ್ಲಿರುವ ಅನಿವಾರ್ಯವಾದ ಗೊಂದಲಗಳಲ್ಲಿ ಒಂದೆಂದರೆ, ಜಾತಿ ಅಸ್ಮಿತೆಯನ್ನು ಮತ್ತಷ್ಟು ತೀವ್ರಗೊಳಿಸದೆ ಅದಕ್ಕೆ ಬೇರೆ ವಿಧಿಯೇ ಇಲ್ಲ. ಆ ಅಸ್ಮಿತೆಗಳನ್ನು ಸೂಚಕಗಳಾಗಿ ಏಕೆ ಉಪಯೋಗಿಸಲಾಗುತ್ತದೆ ಎನ್ನುವ ನಿಟ್ಟಿನ ಸೂಕ್ತ ಸಾಮಾಜಿಕ ಕಾರಣಗಳನ್ನು ಕೊಡುವುದಕ್ಕಿಂತಲೂ ಅಸ್ಮಿತೆಗಳ ಮೇಲೆಯೇ ಗಮನವನ್ನು ಕೇಂದ್ರೀಕರಿಸುವುದರಿಂದ ಚರ್ಚೆಯು ನಂತರದಲ್ಲಿ ದುರ್ಬಲಗೊಳ್ಳುತ್ತದೆ. ನಮ್ಮ ಯೋಜನೆಯು ಅಳೆಯಲು ಸಾಧ್ಯವಾಗುವ ಅನನುಕೂಲತೆಯ ಪ್ರಾಯೋಗಿಕ ಸೂಚಕಗಳೊಂದಿಗೆ ಜಾತಿ ಅಸ್ಮಿತೆಗಳನ್ನು ಸ್ಪಷ್ಟವಾಗಿ ಜೋಡಿಸುತ್ತದೆ. ಹಾಗಾಗಿ ಇದು ಜಾತಿಯನ್ನು ಅನಗತ್ಯಗೊಳಿಸಲು ಮತ್ತು ಈ ಸಮುದಾಯಗಳು ಮಾಡಿರುವ ಸಾಪೇಕ್ಷ ಪ್ರಗತಿಯತ್ತ ಗಮನಹರಿಸಲು ಸಹಾಯ ಮಾಡುತ್ತದೆ. ನಿರ್ದಿಷ್ಟ ಗುಂಪುಗಳಿಗೆ ನೀಡಲಾಗಿರುವ ಸ್ಥಾನಗಳನ್ನು ಸಮರ್ಥಿಸಿಕೊಳ್ಳುವ ಪಾರದರ್ಶಕ ಸೂಚಕಗಳು ಅಗತ್ಯವಾದ ಪರಿಶೀಲನೆ ಮತ್ತು ಮೇಲ್ವಿಚಾರಣೆಗೆ ಮತ್ತು ಅದರೊಟ್ಟಿಗೆ ನ್ಯಾಯಸಮ್ಮತವಾದ ಚರ್ಚೆಗೆ ಅವಕಾಶ ಮಾಡಿಕೊಡುತ್ತವೆ. ವಿವಿಧ ಗುಂಪುಗಳ ಸಾಪೇಕ್ಷವಾಗಿ ಬದಲಾಗುವ ಸ್ಥಾನಗಳಿಗನುಗುಣವಾಗಿ ನೀತಿಗಳಲ್ಲಿ ಹೊಂದಾಣಿಕೆ ಮಾಡಿಕೊಳ್ಳಲು ಈ ಯೋಜನೆಯು ಅವಕಾಶ ಮಾಡಿಕೊಡುತ್ತದೆ. ಮೇಲ್ಜಾತಿಗಳಲ್ಲಿರುವ ಬಡವರ ನ್ಯಾಯಸಮ್ಮತವಾದ ಬೇಡಿಕೆಗಳು ಅಥವಾ ಕೆಳಜಾತಿಗಳಲ್ಲಿರುವ "ಕೆನೆ ಪದರರ" ಗುಂಪನ್ನು ತಡೆದಿಡುವಂತಹ ತೀಕ್ಷ್ಣ ಚರ್ಚಾಂಶಗಳನ್ನು ಸಹ ಈ ಯೋಜನೆಯು ನಿರ್ವಹಿಸುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಸಕಾರಾತ್ಮಕ ಕ್ರಿಯೆಯು ಕೆಲವು ನಿರ್ದಿಷ್ಟ ಜಾತಿ ಮತ್ತು ಸಮುದಾಯಗಳನ್ನು "ಓಲೈಸುವ" ಕುರಿತದ್ದಲ್ಲ, ಬದಲಿಗೆ ನಮ್ಮ ಅಸಮಾನ ಮತ್ತು ಅನ್ಯಾಯಯುತವಾದ ಸಮಾಜದಲ್ಲಿ ಎದ್ದು ಕಾಣುವ ಅನನುಕೂಲತೆಗಳ ಮುಂದುವರೆಯುತ್ತಿರುವ ಮೂಲಗಳನ್ನು ನಾಶಪಡಿಸುವುದಕ್ಕಾಗಿ ಎಂದು ಮುಕ್ತ ಮತ್ತು ಹೊಣೆಗಾರಿಕೆಯಿಂದ ತೋರಿಸಲು ಇದು ಅವಕಾಶ ಮಾಡಿಕೊಡುತ್ತದೆ.